೩೬೨

# ಮ ಧು ರ ಚೆ ನ್ನ

(ಕವಿ-ಕಾವ್ಯ ಪರಿಚಯ)

ಬಸವರಾಜ ನರೇಗಲ್



ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಫೆಬ್ರುವರಿ, ೧೯೮೬

ಉಪನ್ಯಾಸ ಗ್ರಂಥಮಾಲೆ

೩೬೭

# ಮಧುರಚೆನ್ನ

(ಕವಿ-ಕಾವ್ಯ ಪರಿಚಯ)

ಶ್ರೀ ಬಸವರಾಜ ನರೇಗಲ್






ಪ್ರಸಾರಾಂಗ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಫೆಬ್ರುವರಿ, ೧೯೮೬

ಪ್ರಕಾಶಕರು :

**ಎಸ್. ಬಿ. ನಾಯಕ**

ನಿರ್ದೇಶಕರು, ಪ್ರಸಾರಾಂಗ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಥಮ ಮುದ್ರಣ : ೫,೦೦೦ ಪ್ರತಿಗಳು

ಫೆಬ್ರುವರಿ, ೧೯೮೬



ಬೆಲೆ : ೫೦ ಪೈಸೆ

ಮುದ್ರಕರು :

ರಾಜಶ್ರೀ ಪ್ರಿಂಟಿಂಗ ಪ್ರೆಸ್

ತಡಕೋಡ ಗಲ್ಲಿ

ಧಾರವಾಡ

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ಪ್ರಸಾರಾಂಗದ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ "ಉಪನ್ಯಾಸ ಗ್ರಂಥಮಾಲೆ" ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರುವುದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ನಾಲ್ಕು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನಭಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆ ಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನೀರಿಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ

ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವ ದಲ್ಲದೆ ಎಂತಹ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೩೬೬ ಪುಸ್ತಿಕೆಗಳು ಪ್ರಕಟ ವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಿಕೆಗಳು ನಾಲ್ಕು–ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ ಜನಪ್ರಿಯತೆಯನ್ನೂ ವ್ಯಕ್ತಗೊಳಿಸು ತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸು ತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋ ಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಎಸ್. ಜಿ. ದೇಸಾಯಿ
ಕುಲಪತಿ

# ಅರಿಕೆ

ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗವು ಗ್ರಾಮಾಂತರ ಪ್ರದೇಶಗಳಲ್ಲಿ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಿ ಜ್ಞಾನವಾಹಿನಿಯನ್ನು ಜನಸಾಮಾನ್ಯರಿಗೆ ಮುಟ್ಟಿಸುವ ಮಹತ್ತರ ಕಾರ್ಯವನ್ನು ಕಳೆದ ಸುಮಾರು ೩೫ ವರ್ಷಗಳಿಂದ ನಿರಂತರವಾಗಿ ಹಾಗೂ ಯಶಸ್ವಿಯಾಗಿ ನಡೆಯಿಸಿಕೊಂಡು ಬಂದಿದೆ. ಇದರ ಅಂಗವಾಗಿ ೧೯೮೬ರ ಜೂನ್ ೨೪ ಮತ್ತು ೨೫ ರಂದು ವಿಜಾಪುರ ಜಿಲ್ಲೆಯ ಸಮೀರವಾಡಿಯಲ್ಲಿ ಏರ್ಪಡಿಸಿದ ೩೪೮ನೆಯ ಉಪನ್ಯಾಸ ಶಿಬಿರದಲ್ಲಿ ಭಾಗವಹಿಸಿ "ಮಧುರಚೆನ್ನ"ರನ್ನು ಕುರಿತು ಉಪನ್ಯಾಸವೀಯುವ ಸದವಕಾಶ ನನಗೆ ಲಭಿಸಿತ್ತು.

ಮಧುರಚೆನ್ನರು ನಾನು ವಿದ್ಯಾರ್ಥಿದಿಶೆಯಿಂದಲೂ ಮೆಚ್ಚಿಕೊಂಡ, ನನಗೆ ಬಹಳ ಪ್ರಿಯರಾದ, ಆಧ್ಯಾತ್ಮ ಕವಿಗಳು. ಅವರ ಬರಹಗಳನ್ನೆಲ್ಲ ಓದುವುದೆಂದರೆ ನನಗೆ ತುಂಬ ಇಷ್ಟವಾದ ವಿಷಯ. ಮಧುರಚೆನ್ನರ ಬಗೆಗಿರುವ ನನ್ನ ಅಭಿಮಾನ, ಗೌರವ ಹಾಗೂ ಪ್ರಾಮಾಣಿಕ ಅನಿಸಿಕೆಗಳನ್ನು ಸಮೀರವಾಡಿಯಲ್ಲಿ ಭಾಷಣದ ಮೂಲಕ ವ್ಯಕ್ತಪಡಿಸಿದ್ದೆ. ಅದನ್ನೇ ಈಗ ಈ ಪುಸ್ತಿಕೆಯ ರೂಪದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗವು ಪ್ರಕಟಿಸುತ್ತಿರುವುದು ಬಲು ಹೆಮ್ಮೆಯ ವಿಷಯ. ಪ್ರಸಾರಾಂಗದ ನಿರ್ದೇಶಕರಾದ ಶ್ರೀ ಎಸ್. ಬಿ. ನಾಯಕರು, ಸಹಾಯಕ ನಿರ್ದೇಶಕ ಶ್ರೀ ಎಲ್. ಎಮ್. ಗುಡ್ಡಿನ ಅವರು ಹಾಗೂ ಅವರ ಸಿಬ್ಬಂದಿಯವರ ಶ್ರಮವು ಮೆಚ್ಚುವಂತಹದು. ಸಮೀರವಾಡಿಯ ಸಕ್ಕರೆ ಕಾರಖಾನೆಯ ಆವರಣದಲ್ಲಿ ಏರ್ಪಟ್ಟ

ಉಪನ್ಯಾಸ ಶಿಬಿರದ ವ್ಯವಸ್ಥೆಯು ಬಲು ಅಚ್ಚುಕಟ್ಟಾಗಿತ್ತು.
ಇಂತಹ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡ
ಸಮೀರವಾಡಿಯ ಸೋಮಯ್ಯ ಸಕ್ಕರೆ ಕಾರಖಾನೆಯ ಮಜ
ದೂರ ಯೂನಿಯನ್‌ದವರಿಗೆ ಆತ್ಮೀಯ ಅಭಿನಂದನೆಗಳು.

ಆಧ್ಯಾತ್ಮ ಸಾಹಿತ್ಯದ ಅಭಿಮಾನಿ ಓದುಗರು ಈ ಪುಸ್ತಿ
ಯನ್ನು ತುಂಬುಹೃದಯದಿಂದ ಸ್ವಾಗತಿಸುವರೆಂದು ಆಶಿಸಿರುವೆ

‘ಸುವರ್ಣ ಕಿರಣ’ **ಬಸವರಾಜ ನರೇಗಲ್**
ವಿದ್ಯಾಗಿರಿ, ಧಾರವಾಡ-೪

# ಪರಿವಿಡಿ

# ೧. ಅಗಲಿದ ಮಧುರಚೆನ್ನ

ಆಗಸ್ಟ ೧೫, ೧೯೫೩ರಂದು ದೇಶದ ಜನತೆ ಏಳನೆಯ ಸ್ವಾತಂತ್ರ್ಯೋತ್ಸವವನ್ನು ಸಂಭ್ರಮದಿಂದ ಆಚರಿಸುತ್ತಿರುವಾಗ ಕನ್ನಡಿಗರಿಗೆ ಒಂದು ದುರಂತ ವಾರ್ತೆ ಕಾದಿತ್ತು; ಅದುವೆ 'ಮಧುರಚೆನ್ನ' ರೆಂಬ ಕಾವ್ಯನಾಮದಿಂದ ಖ್ಯಾತರಾದ ಹಲಸಂಗಿ ಚೆನ್ನಮಲ್ಲಪ್ಪ ಅವರ ಅಕಾಲಿಕ ನಿಧನ!! ನಾಡು-ನುಡಿಗಳ ಸೇವೆಗೆಂದೇ ದೂರದ ಹಲಸಂಗಿಯಲ್ಲಿ 'ಗೆಳೆಯರ ಗುಂಪೊಂದು' ಹುಟ್ಟುಹಾಕುವುದಲ್ಲದೆ ತಮ್ಮ ಲೇಖನ ಹಾಗೂ ಆಧ್ಯಾತ್ಮಿಕ ಜೀವನಗಳಿಂದ ನಾಡಿನ ಗಮನ ಸೆಳೆದ ಮಧುರಚೆನ್ನರಿಗೆ ಸಾವು ಇಷ್ಟೊಂದು ಬೇಗ ಬರಬಹುದೆಂದು ಯಾರೂ ಭಾವಿಸಿರಲಿಲ್ಲ. ವಿಧಿಯ ನಿಷ್ಠುರ ಲೀಲೆಯು ಅವರನ್ನು ಸೆಳೆದುಕೊಂಡು ತನ್ನ ಕಾರ್ಯವನ್ನು ಅಪೂರ್ಣಗೊಳಿಸಿತ್ತು.

ಆಗಸ್ಟ ೧೬, ೧೯೫೩ ರಂದು ನಾನು ಎಂದಿನಂತೆ ಕರ್ನಾಟಕ ಕಾಲೇಜಿಗೆ ಅಧ್ಯಯನಕ್ಕೆ ತೆರಳಿದಾಗ ಅಗಲಿದ ಮಧುರಚೆನ್ನರಿಗೆ ಅಶ್ರುತರ್ಪಣ ಕಾರ್ಯಕ್ರಮವಿರುವ ಫಲಕ ನನ್ನನ್ನು ಮಹಾದ್ವಾರದಲ್ಲಿಯೇ ಎದುರುಗೊಂಡಿತು. ನಿಗದಿತ ಸಮಯಕ್ಕೆ ಮಧುರಚೆನ್ನರ ಆತ್ಮೀಯ ಸ್ನೇಹಿತರೂ, ಕನ್ನಡ ಖ್ಯಾತ ಕವಿಗಳೂ ಹಾಗೂ ಕರ್ನಾಟಕಕಾಲೇಜಿನ ಅಂದಿನ ಪ್ರಿನ್ಸಿಪಾಲರೂ ಆಗಿದ್ದ ಡಾ॥ ವ್ಹಿ.ಕೃ. ಗೋಕಾಕ ಅವರ ಅಧ್ಯಕ್ಷತೆಯಲ್ಲಿ ಜರುಗಿದ ದುಃಖ ಸಭೆಯಲ್ಲಿ ಡಾ॥ ಗೋಕಾಕರು ಮಧುರಚೆನ್ನರ ಸಾಹಿತ್ಯಿಕ ಹಾಗೂ ಆಧ್ಯಾತ್ಮಿಕ ಕಾರ್ಯಚಟುವಟಿಕೆಗಳನ್ನು ವಿದ್ಯಾರ್ಥಿಗಳಿಗೆ ಮನಂಬುಗುವಂತೆ ವಿವರಿಸಿದರು. ಸರಿ. ಈ

ಮೊದಲೇ ಮಧುರಚೆನ್ನರ ಸಾಹಿತ್ಯವನ್ನು ಅಭ್ಯಸಿಸಿದ ನನಗೆ ಡಾ|| ಗೋಕಾಕರ ಮಾತುಗಳು ಮತ್ತಷ್ಟು ಮನಸ್ಸನ್ನು ಸೂರೆ ಗೊಂಡು ಮಧುರಚೆನ್ನರನ್ನು ಕುರಿತ ಕಾವ್ಯ ರಚನೆಗೆ ಪ್ರೇರಣೆ ನೀಡಿದವು.

ಆಧ್ಯಾತ್ಮಿಕ ಸಾಧನೆಯ ಬದುಕನ್ನು ಬದುಕಿದ ಮಧುರ ಚೆನ್ನರ ಬಗ್ಗೆ ಕರ್ನಾಟಕದ ಹಿರಿಯ ಪತ್ರಿಕೋದ್ಯಮಿಗಳೊಬ್ಬರು ತಮ್ಮ ಸಂಪಾದಕೀಯದಲ್ಲಿ, "ಹಲಸಂಗಿಯ ಚೆನ್ನಮಲ್ಲಪ್ಪನವರ ನಿಧನದಿಂದ ಮಹಾಜೀವವೊಂದು ಕಣ್ಮರೆಯಾದಂತಾಯಿತು. ದೇವ ಮೆಚ್ಚಿ ಅಹುದೆನ್ನುವಂತಹ ಮಧುರ ಜೀವನವನ್ನು ಬದುಕಿ ಜೀವನ ಯಾತ್ರೆಯ ಪಯಣಿಗರಿಗೆಲ್ಲ ದಾರಿಯುದ್ದಕ್ಕೂ ಪರಿ ಮಳ ಬೀರುವ ಆದರ್ಶವನ್ನು ಅವರು ತಮ್ಮ ಹಿಂದೆ ಬಿಟ್ಟು ಹೋಗಿದ್ದಾರೆ. ಸಂಸಾರದಲ್ಲಿ ಬದುಕಿದ್ದರೂ ಸಂಸಾರದ ತಿರು ಗಣಿ ಮಡುವಿನಲ್ಲಿ ಸಿಕ್ಕಿ ಬೀಳದೆ ಅವರು ಇಲ್ಲಿ ದೇವ ಮಾನವ ರಾಗಿ ಬದುಕಿ ಹೋದರು" ಎಂದು ಬರೆದರು.

"ಸಣ್ಣ ಹಳ್ಳಿಯೊಂದರ ಬಡ ಕುಟುಂಬದಲ್ಲಿ ಬೆಳೆದು ಬಂದ ಮಧುರಚೆನ್ನರು ಧ್ಯೇಯನಿಷ್ಠ ಜೀವನವನ್ನು ಬದುಕಿ ತಮ್ಮ ತಪಸ್ಸಾಧನೆಯಿಂದ ನಾಡಿಗೆಲ್ಲ ಬೇಕಾದರು. ಮಧುರ ಚೆನ್ನರು ತತ್ವಜ್ಞಾನಿಯಾಗಿಯೇ ಬೆಳೆದು ಬಂದರು. ದೇವ ಮಾನವ ಸಂಬಂಧದ ಸೂಕ್ಷ್ಮ ಸಾಮರಸ್ಯವು 'ನನ್ನ ನಲ್ಲ' ಎನ್ನುವ ಅಮೋಘ ಅಪೂರ್ವ ಗೀತ ಸಂಕಲನದಲ್ಲಿ ಸಾಲು ಸಾಲಿಗೂ ರಸ ಪ್ರವಾಹವಾಗಿ ಹರಿದಿದೆ ಈ ಕವಿಯ ಪ್ರತಿಭೆಯು ಕನ್ನಡ ನಾಡಿನ ವ್ಯಕ್ತಿಶಕ್ತಿಗಳನ್ನು ತನ್ನೆಡೆಗೆ ಸೆಳೆದುಕೊಂಡು ಕುಗ್ರಾಮ

ವಾದ ಹಲಸಂಗಿಗೆ ಹೊಸ ರೂಪವನ್ನು ತಂದು ಕೊಟ್ಟಿತು. ಬರಹಗಾರರ ಒಂದು ಬಳಗವೇ ಮಧುರಚೆನ್ನರ ಸುತ್ತು ಮುತ್ತಲೂ ಬೆಳೆಯಿತು. ಶ್ರೀ ಅರವಿಂದ ಮಹಾಯೋಗಿಗಳ ಮಹಾಸಾಧನೆಯನ್ನು ಕನ್ನಡ ಕುಲಕ್ಕೆ ನಿವೇದಿಸುವ ಕರ್ತವ್ಯ ವನ್ನು ಹೊತ್ತು ಮಧುರಚೆನ್ನರು ತಮ್ಮನ್ನೇ ತಾವು ಅರ್ಪಣ ಮಾಡಿಕೊಂಡರು. ಸಕಲರಿಗೂ ಲೇಸನೇ ಬಯಸುವ ಉದಾತ್ತ ಜೀವನವೊಂದು ಇಲ್ಲವಾದರೆ ಜನರ ಬದುಕು ಬಡವಾದಂತೆಯೇ. ಮಧುರಚೆನ್ನರು ನಮಗಾಗಿ ಪರದಲ್ಲಿಯೂ ದಯೆಯನ್ನು ಕೋರಲಿ" ಎಂದೂ ಬರೆದಿದ್ದಾರೆ.

ಬರಗಾಲದ ತವರೂರೆಂದೆನ್ನಿಸಿದ ಕರ್ನಾಟಕದ ಗೊರಸು ಭೂಮಿಯಾದ ವಿಜಾಪುರ ಜಿಲ್ಲೆಯಲ್ಲಿ ಕಾವ್ಯರಸ ಚಿಮ್ಮಿಸಿದವರು ಮಧುರಚೆನ್ನರು. ತಮ್ಮ ತಪಸ್ಸಿನ ಪ್ರಭಾವದಿಂದ ಕನ್ನಡ ನಾಡನ್ನು ಪಾವನಗೊಳಿಸಿ ಜೀವನದುದ್ದಕ್ಕೂ ಗೆಳೆಯರನ್ನು ಕಟ್ಟಿ ಕೊಂಡು ಬಾಳಿದರು. ಆ ಗೆಳೆಯರ ಗುಂಪಿನಲ್ಲಿದ್ದ ಹಿರಿಯ ಜೀವಿಗಳಾದ ಕತೆಗಾರ 'ಕಾಪಸೆ ರೇವಪ್ಪ', ಕವಿ ಕಾಡಹಕ್ಕಿ ಯೆಂದು ಖ್ಯಾತಿಪಡೆದ ಪಿ. ಧೂಲಾಸಾಹೇಬ' ಇವರೀರ್ವರನ್ನೂ ನಾಡು ಈ ಮೊದಲೇ ಕಳೆದುಕೊಂಡಿತ್ತು. ಉದ್ದೇಶ, ಆಶೆ, ಧ್ಯೇಯಗಳೆಲ್ಲ ಹಿರಿಯವಾಗಿದ್ದು ಹಿರಿಯ ಜೀವಿಗಳಾದ್ದ ಶ್ರೀ ಹಲಸಂಗಿ ಚೆನ್ನಮಲ್ಲಪ್ಪನವರ ಬಾಳು ಕಷ್ಟಮಯವಾಗಿತ್ತು. ಹಾಗಿದ್ದರೂ ಜೀವನ ಬದುಕುಗಳು ಒಂದು ಹದಕ್ಕೆ ಬಂದವೆನ್ನು ತ್ತಿರುವಂತೆಯೇ ಮಧುರಚೆನ್ನರನ್ನು ಕ್ರೂರ ವಿಧಿ ಕೊಂಡೊ ಯ್ದಿತು. ಭೂಮಿತಾಯಿಯ ಬಸಿರಿಂದ ಬಂದ 'ಮಧುರಚೆನ್ನ' ಎಂಬ ಹೂವು ಶಿವನ ಪೂಜೆಗೆ ಅರ್ಪಿತವಾಯಿತು. ಹಚ್ಚ

ಹಸುರಿನ ಬಸದ ಕೋಗಿಲೆ 'ಶಿವಶಿವಾ' ಎಂದುಲಿಯಿತು. 'ಮಧುರಚೆನ್ನರಿಗೆ' ಅವರ ಐವತ್ತನೆಯ ವರ್ಷದ ವರ್ಧಂತ್ಯೋತ್ಸವದ ಕಾಲಕ್ಕೆ ಕನ್ನಡನಾಡು ತನ್ನ ಗೌರವ ಸಲ್ಲಿಸಬೇಕಾಗಿದ್ದಿತು. ಆದರೆ ನಾಡಿನ ದುರ್ದೈವದಿಂದಲೋ ಅಥವಾ ನಮಗೆ ಆ ಪುಣ್ಯವಿಲ್ಲವೆಂತಲೋ ಸರಿಯಾಗಿ ಅದೇ ಸಮಯಕ್ಕೆ ಕರುಳಿನ ಬೇನೆ (ಕ್ಯಾನ್ಸರ್) ಅವರನ್ನು ಆಕ್ರಮಿಸಿತು. ಲೇಸಾದ ಬಡತನಕೆ ಮೀಸಲದ ಕೂಸಾಗಿ ಬೆಳೆದು ಬಂದ ಅವರು ಆರೋಗ್ಯದಿಂದ ಇದ್ದುದು ಎಂದೋ ಏನೋ ! ಸದಾ ಔಷಧ, ಉಪಚಾರ. ಅವರ ಅನಾರೋಗ್ಯದಲ್ಲಿ ಅವರ ಗೆಳೆಯರು ಸಹಾಯ ನೀಡುತ್ತಿದ್ದುದು ಸಾಮಾನ್ಯವಾಗಿತ್ತು. ಕರುಳು ಬೇನೆಯ ಸಂದರ್ಭದಲ್ಲಿಯೂ ಅವರಿಗೆ ತಕ್ಕ ಉಪಚಾರ ದೊರಕಿಸಲು ಪ್ರಯತ್ನಿಸಲಾಯಿತು. ಮಿರಜದಲ್ಲಿ ಅಂತಿಮ ಉಪಚಾರ ಪಡೆದರೂ ಪ್ರಯೋಜನವಾಗಲಿಲ್ಲ. ದೈವೇಚ್ಛೆಯೇ ಬೇರೆಯಿದ್ದಾಗ ಮಾನವನ ಪ್ರಯತ್ನಗಳಿಗೆ ಫಲವೆಲ್ಲಿಂದ ಬರಬೇಕು ? ದೇಹವನ್ನು ಕೊರಗಿಸಿದ ಆತ್ಮವನ್ನು ಅರಳಿಸಿಕೊಂಡ ಅಧ್ಯಾತ್ಮಜೀವಿಗಳಾದವರಿಗೆ ಮರಣವೆಂಬುದು ಮಹಾನವಮಿಯಾಯಿತು. 'ನಾಳೆ ಬಪ್ಪುದೆಮಗಿಂದೇ ಬರಲಿ. ಇಂದೆ ಬಪ್ಪುದೆಮಗೀಗಲೇ ಬರಲಿ' ಇದಕಂಜಲಾರೆವು ಅಳುಕಲಾರೆವು ಎಂದೆನ್ನಬಲ್ಲ ಚೆನ್ನಮಲ್ಲಪ್ಪನವರಂಥ ವರ್ಗದ ಶರಣರಿಗೆ ಹುಟ್ಟು. ಸಾವು ಎರಡೂ ಅಷ್ಟೇ. ಆಧ್ಯಾತ್ಮಿಕ ಕಾವ್ಯ, ಆಧ್ಯಾತ್ಮಿಕ ಕಾದಂಬರಿ, ಆಧ್ಯಾತ್ಮಿಕ ಪ್ರಬಂಧಗಳನ್ನು ನಾಡಿಗೆ ನೀಡಿ' ನಡೆನುಡಿಗಳನ್ನೊಂದಾಗಿಸಿ ಆಧ್ಯಾತ್ಮಿಗಳಾಗಿ ಬಾಳಿದ ಮಧುರಚೆನ್ನರು' 'ಅಯ್ಯಾ ಎಂಬುವದೇ ಸ್ವರ್ಗ, ಎಲವೋ ಎಂಬುವದೇ ನರಕ' ಎಂಬುದನ್ನು ಚೆನ್ನಾಗಿ ಅರಿತವರಾಗಿದ್ದರು. ಸರಳತೆ ಮತ್ತು ಸೌಜನ್ಯದ ದಿವ್ಯಮೂರ್ತಿಯಾಗಿದ್ದರು. ಅಷ್ಟೇ ಏಕೆ ?

ಜನ್ಯ ಸರಳತೆಯೆಂದರೇನೇ ಅವರೆಂದು ಹೇಳಿದರೆ ಇನ್ನೂ ತ್ತು ಒಪ್ಪೀತು. ದೇವದೇವನ ಲೀಲೆ ಇರುವ ಕಾರಣ ಂದಾರಲೋಕದ ಬೆಳಕಿನೊಂದಿಗೆ ಈ ನೆಲದ ಬೆಳಕೂ ಹೋಗಿ ರಿತು. ಪೂರ್ಣಮಿಲ್ಲಿಯೂ ಪೂರ್ಣಮಲ್ಲಿಯೂ ಪೂರ್ಣ ಹೊಳೊಂದಾಯಿತು. ದೇವನನ್ನು ಕಾಣಲು ಹಂಬಲಿಸಿದ ಧುರಚೆನ್ನರ ವ್ಯಕ್ತಿತ್ವವನ್ನು ಅರಿತುಕೊಳ್ಳಬೇಕಾದರೆ ಅವ ದ ಅನುಭವಪೂರ್ಣವಾಗಿ ತುಂಬಿ ಬಂದ ಕೃತಿಗಳನ್ನೇ ಅವ ೋಕಿಸಬೇಕು.

ಕಣ್ಣು ಹೋದಾಗ ಕಣ್ಣಿನ ಅಧಿಕ ಮಹತ್ವ ಗೊತ್ತಾಗು ಂತೆ ಮಧುರಚೆನ್ನರು ಇಹಲೋಕ ವ್ಯಾಪಾರವನ್ನು ಮುಗಿಸಿದ ೇಲೆ ಅವರ ಮಹತ್ವವನ್ನು ಕನ್ನಡನಾಡಿನ ಜನತೆ ಅರಿ ತಾಯಿತು. ಪತ್ರಿಕೋದ್ಯಮಿಗಳೂ, ಕವಿಗಳೂ, ಲೇಖಕರೂ, ನುಭವಿಗಳೂ—ಎಲ್ಲರೂ ಅವರಿಲ್ಲವಾದಮೇಲೆ ಮುಕ್ತಕಂಠ ದ ಗುಣಗಾನ ಮಾಡಿದರು. ಮಧುರಚೆನ್ನರದು ಅನುಭವ ರ್ಣ ಸಾಹಿತ್ಯ, ಅವರ ಹಿರಿಯ ಜೀವನದರಿವು ಮತ್ತು ರ ಆಧ್ಯಾತ್ಮ ಜೀವನ ಗೊತ್ತಾಗಬೇಕಾದರೆ ಅವರ 'ಪೂರ್ವ ಗ', 'ಕಾಳರಾತ್ರಿ', 'ಬೆಳಗು' ಎಂಬ ಅಮೂಲ್ಯ ಗ್ರಂಥ ನ್ನೂ 'ನನ್ನ ನಲ್ಲ'ದಂತಹ ಅತಿಸುಂದರವಾದ ಆಧ್ಯಾತ್ಮಿಕ ವ್ಯವನ್ನೂ ಓದಬೇಕು. ಅನಂತರ ಅವರೆಂಥ ದೊಡ್ಡ ಜೀವಿ ಬುದು ಗೊತ್ತಾಗುತ್ತದೆ. ಮಹಾತಾಯಿಯವರ ವಚನವನ್ನು ಂವಾದಿಸಿದ 'ಮಾತೃವಾಣಿ' ಹಾಗೂ ಉತ್ತರ ಯೋಗಿ ಶ್ರೀ ವಿಂದರ 'ಪೂರ್ಣಯೋಗ' ಎಂಬ ಇನ್ನೊಂದು ಅನುವಾದಿತ ಥವನ್ನು ಹಾಗೂ 'ಧರ್ಮಕ್ಷೇತ್ರೇ ಕುರುಕ್ಷೇತ್ರೇ' ಎಂಬ ನ್ನೊಂದು ಪ್ರಬಂಧವನ್ನು ಓದಿದರೆ ಮಧುರಚೆನ್ನರ ಜೀವನದ ನೆ ಗಮನಕ್ಕೆ ಬರುತ್ತದೆ. 'ಬಾಳಿನಲ್ಲಿ ಬೆಳಕು' 'ಕನ್ನಡಿ

ಗರ ಕುಲಗುರು' ಮತ್ತಿತರ ಸಾಹಿತ್ಯಿಕ ಪುಸ್ತಕಗಳು ಅವರ ಆದರ್ಶಪರ ಚಿಂತನೆಗೆ ಕುರುಹಾಗಿವೆ.

'ಮಾನಸರಾಜಹಂಸಿ', 'ಸಾಧನ ಸಮಾಪ್ತಿ' ಎಂದು ಎರಡು ಪುಸ್ತಕಗಳ ರೂಪದಿಂದ ಆತ್ಮಚರಿತ್ರೆ ಬರೆಯುವೆನೆಂದು ಮಧುರಚೆನ್ನರು "ಬೆಳಗು" ಎಂಬ ತಮ್ಮ ಪುಸ್ತಕದ ಮೊದಲ್ನುಡಿಯಲ್ಲಿ ತಿಳಿಸಿದ್ದರು. ಅದರಲ್ಲಿ (ಗುಣಾವಗುಣಸಮೇತ) ಅವಗುಣಗಳನ್ನು ಸಹ ಮುಚ್ಚಿಡುವದಿಲ್ಲೆಂದೂ ಬರೆದಿದ್ದರು. ಅವರೇ ಹೇಳಿದಂತೆ ಅವುಗಳನ್ನು ಪುಸ್ತಕ ರೂಪದಿಂದ ಬರೆಯುವದರ ಪ್ರಯೋಜನ ಕಾಣಿಸಲಿಲ್ಲವಾದ ಕಾರಣ ಬಿಟ್ಟುಬಿಟ್ಟರಂತೆ. ಆದರೂ ತಮ್ಮ ಆಪ್ತಬಂಧುಗಳನೇಕರ ಅಭಿಲಾಷೆಯ ಮೂಲಕ ಹಾಗೂ ಅವರಿಗೆ ಸೂಕ್ತ ಕಂಡದ್ದರಿಂದ "ಆತ್ಮ ಸಂಶೋಧನೆ" ಎಂಬ ಒಂದು ದೊಡ್ಡ ಲೇಖನವನ್ನು ಬರೆದಿದ್ದಾರೆ. ಶಿವೈಕ್ಯರಾಗುವ ಕೆಲ ದಿನಗಳ ಹಿಂದೆ 'ನವಯುಗ'ಕ್ಕಾಗಿ 'ಆತ್ಮ ಸಂಶೋಧನೆ' ಎಂಬ ದೀರ್ಘ ಲೇಖನವನ್ನು ಬರೆದು ಯೋಗ ಬಂದಾಗ ಪ್ರಕಟಿಸಬೇಕೆಂದು ಕೇಳಿಕೊಂಡಿದ್ದರು. ಅವರ ಅನಿರಿಕ್ಷಿತ ನಿಧನದ ನಂತರ ಚೇತೋಹಾರಿ ಆತ್ಮಾನುಭವವನ್ನು ಹದಿನಾಲ್ಕು ಕಂತುಗಳಲ್ಲಿ ವಿಭಾಗಿಸಿ ಪ್ರತಿ ರವಿವಾರದ ಸಂಚಿಕೆಯಲ್ಲಿ ಸಂಪಾದಕರು ಪ್ರಕಟಿಸಿ ಕನ್ನಡ ಸಾರಸ್ವತಲೋಕಕ್ಕೆ ಮಹದುಪಕಾರ ಮಾಡಿದರು. ಈ ಲೇಖನದಲ್ಲಿ ಮಧುರಚೆನ್ನರು ತಮ್ಮ ಆತ್ಮ ಸಂಶೋಧನೆಯ ಹಂತಗಳನ್ನು ವಿವರಿಸಿ, ಬ್ರಹ್ಮಾಂಡದಲ್ಲಿಯೂ ಪಿಂಡಾಂಡದಲ್ಲಿಯೂ ಪರಮಾತ್ಮನನ್ನು ಕಾಣುವ ಬಹಳ ಕಠಿಣವಾದ ಕಾರ್ಯದ ಪರಿಚಯವನ್ನು ಮಾಡಿಕೊಟ್ಟಿದ್ದಾರೆ. ಈ 'ಆತ್ಮ ಸಂಶೋಧನೆ' ಅನಂತರ ಪ್ರಕಟವಾಗಿದೆ.

# ೨. ವಿದ್ಯಾರ್ಥಿ

ಮಧುರಚೆನ್ನರು ೧೯೦೩ರಲ್ಲಿ ವಿಜಾಪುರ ಜಿಲ್ಲೆಯ ಇಂಡಿ ತಾಲೂಕಿನ ಹಲಸಂಗಿ ಗ್ರಾಮದಲ್ಲಿಯ ಗಲಗಲಿ ಎಂಬ ಮನೆತನದಲ್ಲಿ ಜನ್ಮ ತಾಳಿದರು. ಇವರ ಜನ್ಮನಾಮ ಚೆನ್ನಮಲ್ಲಪ್ಪ ಎಂಬುದು. ಇವರ ತಂದೆಯವರು ೨೮ನೇ ವಯಸ್ಸಿನಲ್ಲಿಯೇ ತಮ್ಮ ಸತಿ ಮತ್ತು ಏಕಮಾತ್ರ ಪುತ್ರ ಶ್ರೀ ಚೆನ್ನಮಲ್ಲಪ್ಪ ಇವರನ್ನುಳಿದು ಕ್ಷಯರೋಗದ ನಿಮಿತ್ತ ಕೈಲಾಸವಾಸಿಯಾದರು. ಚಿಕ್ಕಂದಿನಲ್ಲಿಯೇ ತಂದೆಯನ್ನು ಕಳೆದುಕೊಂಡ ಚೆನ್ನಮಲ್ಲಪ್ಪ ತಾಯಿಯಿಂದಲೇ ಲಾಲನೆ. ಪಾಲನೆ, ಹೊಂದಿದರು. ಆದರ್ಶ ವಿದ್ಯಾರ್ಥಿಗಳಾಗಿದ್ದು ೧೯೨೧ರಲ್ಲಿ ಮುಲಕೀ ಪರೀಕ್ಷೆಯಲ್ಲಿ ಜಿಲ್ಲೆಗೆ ಮೊದಲಿಗರಾಗಿ ಅಧಿಕ ಗುಣಗಳೊಂದಿಗೆ ತೇರ್ಗಡೆ ಹೊಂದಿದರು. ವಿಜಾಪುರಕ್ಕೆ ಹೋಗಿ ಎಚ್. ಬಿ. ಕೊಣ್ಣೂರ ಎಂಬವರಲ್ಲಿ ಖಾಸಗಿಯಾಗಿ ಅಲ್ಪ ಸ್ವಲ್ಪ ಇಂಗ್ಲೀಷ ಅಭ್ಯಾಸ ಮಾಡಿದರು. ಮುಂದೆ ಮನೆಯಲ್ಲಿಯೇ ಇದ್ದುಕೊಂಡು ಅನೇಕ ಭಾಷೆಗಳನ್ನು ಅಭ್ಯಸಿಸಿ ವಿದ್ಯಾ ಸಂಸ್ಕೃತಿಗಳನ್ನು ಅಳವಡಿಸಿಕೊಂಡು ನಮ್ಮ ನಾಡಿನ ಹಿರಿಯ ಸಾಹಿತಿಗಳೂ, ಆಧ್ಯಾತ್ಮ ಜೀವಿಗಳೂ, ಸಾಧಕರೂ, ಶರಣರೂ, ದೇವಮಾನವರೂ ಎಂದು ಹೆಸರುವಾಸಿಯಾದರು.

ವಿಜಾಪುರ ಜಿಲ್ಲೆಯು ಧರ್ಮಕ್ಷೇತ್ರ, ಕುರುಕ್ಷೇತ್ರಗಳಿಗೆ ಹೆಸರಾಗಿದೆ. ಐಹೊಳೆ, ಪಟ್ಟದಕಲ್ಲು, ಮಾಕೂಟ, ಶಿವಯೋಗ ಮಂದಿರ, ಕೂಡಲ ಸಂಗಮ; ಬಬಲೇಶ್ವರಮಠ ಮುಂತಾದ ಮಠಮಾನ್ಯಗಳೂ ಹಾಗೂ ವಿಜಾಪುರ, ತಾಳಿಕೋಟೆಗಳಂತಹ

ಐತಿಹಾಸಿಕ ಸ್ಥಳಗಳೂ ರಕ್ಕಸಗಿ-ತಂಗಡಗಿಗಳಂತಹ ಕುರು
ಕ್ಷೇತ್ರ (ಯುದ್ಧ) ಭೂಮಿಗಳೂ ಮಧುರಚೆನ್ನರ ಮನಸೆಳೆದು
ಆ ಪರಗಣೆಯನ್ನೆಲ್ಲ ಸುತ್ತುಹಾಕುವಂತೆ ಮಾಡಿದವೆಂದು ಸ್ವತ
ಮಧುರಚೆನ್ನರೇ ಹೇಳಿದ್ದಾರೆ. ಮಧುರಚೆನ್ನರ ನಿತ್ಯಜೀವನ
ಕ್ರಮವು ಜ್ಞಾನಭಿಕ್ಷುವಿನ ಪಾತ್ರದ ಮುಖಾಂತರ ಗೊತ್ತಾಗು
ತ್ತದೆ. ಜ್ಞಾನಭಿಕ್ಷುವು ಚಿಕ್ಕಂದಿನಲ್ಲಿಯೇ ಧಾರ್ಮಿಕ ಪ್ರವೃತ್ತಿ
ಯುಳ್ಳವನಾಗಿದ್ದ ಕಾರಣ, ಪುರಾಣ, ಪುಣ್ಯಕಥೆಗಳಲ್ಲಿ ಆಸಕ್ತಿ
ಯಿದ್ದು, ತೀರ್ಥಕ್ಷೇತ್ರಗಳಿಗೆ ಸಂದರ್ಶನವಿತ್ತು, ಮಾನಸಿಕ
ಪೂಜೆಯಿಂದಲೂ ಅತೃಪ್ತನಾಗಿ ದೇವರಿಲ್ಲವೆಂಬ ನಿರ್ಣಯಕ್ಕೆ
ಬರುತ್ತಾನೆ. ವಿವೇಕಾನಂದ, ರಾಮಕೃಷ್ಣ ಪರಮಹಂಸ
ಅರವಿಂದರ ಗ್ರಂಥಗಳನ್ನು ಓದಿ ಚರ್ಮಚಕ್ಷುವಿನಿಂದ ದೇವ
ಇರುವನ್ನು ಕಾಣಲಿಕ್ಕೆ ಬರಲಾರದೆಂದು ಪ್ರಾಮಾಣಿಕ ಗ್ರಂ
ಗಳಿಂದ ಮನವರಿಕೆಯಾದ್ದರಿಂದ ಮತ್ತೆ ಆಶೆ ಹುಟ್ಟಿ, ಆತ್ಮ
ಹತ್ಯೆ ಮಾಡಿಕೊಳ್ಳುವದಕ್ಕೆ ಸಾಹಸ ಮಾಡಿದ್ದನ್ನು ಬಿಟ್ಟು
ಬಿಡುತ್ತಾನೆ. ಪುರಾತನ ಪುರುಷರ ಪಾದಧೂಳಿಯಿಂದ ಪವಿತ್ರ
ವಾದ ಪುಣ್ಯಕ್ಷೇತ್ರಗಳಿಗೆ ಪಯಣ ಬೆಳೆಸಿ ಪುರಾತನರನ್ನು ನೆನೆ
ನೆನೆಸಿ ಗೋಳಿಟ್ಟು, ಒಬ್ಬ ವೃದ್ಧ ಸನ್ಯಾಸಿಯ ಹಿತಮಿತ ಮಾತ
ಗಳು ಜ್ಞಾನಭಿಕ್ಷುವಿಗೆ ಸಮಾಧಾನ ತರಲು ಆತನ ಚಿತ್ತವು ಜ
ಸೃಷ್ಟಿಯಿಂದ ಹೊರಳಿ ಜೀವನ ಸೃಷ್ಟಿಯ ಕಡೆಗೆ ಬರುತ್ತದೆ
ಮಧುರಚೆನ್ನರಿಗೆ ಅವರ ೧೨ನೆಯ ವಯಸ್ಸಿನಲ್ಲಿಯೇ ದೇವ
ವಿಷಯಕ್ಕೆ ಆಸಕ್ತಿ ತೋರಿದ್ದು 'ಪೂರ್ವರಂಗ'ದಲ್ಲಿ ಕಂಡುಬರ
ಬರುತ್ತದೆ. ಇನ್ನೂ ಮಾಧು, ಚೆನ್ನಪ್ಪ, ರೇವಪ್ಪ ಮೊದಲ
ದವರು ಆಗ ಎಳೆ ಗೆಳೆಯರಾಗಿದ್ದಂತಿದೆ. ಅರವಿಂದರ ಸಾಹಿತ್ಯ
ಭ್ಯಾಸ, ಶ್ರೀ ಬೇಂದ್ರೆಯವರ ಗುಂಪಿನ ಸಹವಾಸಗಳ ಫಲವಾ

...ಲಸಾಗಿಯು ಗೆಳೆಯರಲ್ಲಿಯೂ ಧ್ಯೇಯವಾದವು. ಮೂಡಿ ...ಂತು ಅವರವರ ದೃಷ್ಟಿಗೆ ಅವರವರ ಆದರ್ಶ ಕಾಣಿಸಿ ...ಕೊಂಡಂತೆ ತೋರುತ್ತದೆ.

ಮಧುರಚೆನ್ನರಿಗೆ ಅಧ್ಯಾತ್ಮವು ನಿಶ್ಚಿತ ಪ್ರಯೋಜನ ವಾಗಿದ್ದಿತು. ಶ್ರೀ ಅರವಿಂದರ ತತ್ತ್ವಜ್ಞಾನಕ್ಕೆ ಮಾರುಹೋದ ಅವರು ಅರವಿಂದರ ಜಯಂತಿಯನ್ನು ಆಚರಿಸುತ್ತ 'ಅರವಿಂದ ಗ್ರಂಥಮಾಲೆ'†ಯನ್ನು ತೆರೆದರು. ಈ ಗ್ರಂಥಮಾಲೆಯ ಮೂಲಕ ತಮ್ಮ ಆದರ್ಶಕ್ಕೆ ತಕ್ಕಂತೆ ಆಧ್ಯಾತ್ಮಿಕ ವಿಚಾರಗಳ ಗ್ರಂಥಗಳನ್ನು ಪ್ರಕಟಿಸಿದರು.

ಮಧುರಚೆನ್ನರು ಪರಮಾತ್ಮನನ್ನು ಅರಿಯುವದಕ್ಕೆ ಆಕಾಶದ ಅನಂತತ್ವವೊಂದೇ ಮಾರ್ಗವೆಂದು ಒಂದು ಹಂತದಲ್ಲಿ ತಿಳಿದುಕೊಂಡರು. ಇದು ಅವರ ದರ್ಶನದ ಪ್ರಥಮ ಪರಿಚಯ. ಇಷ್ಟಾದ ಬಳಿಕ ಜ್ಞಾನಭಿಕ್ಷುವಾದ ಮಧುರಚೆನ್ನರಿಗೆ ಆನುವಂಶಿಕ ವ್ಯಾಧಿಯೊಂದು ಗಂಟು ಬೀಳುತ್ತದೆ. ಈ ಮೊದಲೇ ತಿಳಿಸಿದಂತೆ ಮಧುರಚೆನ್ನರ ತಂದೆಯು ಕ್ಷಯಕ್ಕೆ ತುತ್ತಾದಂತೆ ಜ್ಞಾನಭಿಕ್ಷುವೂ ಕ್ಷಯಸದೃಶ ಆನುವಂಶಿಕ ವ್ಯಾಧಿಯಿಂದ ಬಳಲ ಬೇಕಾಗುತ್ತದೆ. ಈ ಮೊದಲೇ ಅವರ ಲಗ್ನವಾಗಿದ್ದು, ರೋಹಿಣಿ ಎಂಬ ಆ ಸಹಧರ್ಮಿಣಿಯಿಂದ ಜ್ಞಾನಭಿಕ್ಷುವಿನ ಆರೈಕೆ ಸಾಗುತ್ತದೆ. ಮನೆತನದ ಜವಾಬ್ದಾರಿಯನ್ನು ಅವರು

---

†ಮಧುರಚೆನ್ನರ ನಿಧನಾನಂತರ ಶ್ರೀ ಸಿಂಪಿ ಲಿಂಗಣ್ಣ ಅವರು ಮುಂದು ವರಿಸಿಕೊಂಡು ತನ್ಮೂಲಕ ಅನೇಕ ಆಧ್ಯಾತ್ಮಿಕ ಗ್ರಂಥಗಳನ್ನು ಪ್ರಕಟಿಸು ತ್ತಿದ್ದಾರೆ.

ಹೊತ್ತುಕೊಂಡದ್ದರಿಂದ ಇವರು ಓದಿನಲ್ಲಿ ಮಗ್ನರಾಗಿ ಬಿಡು ತ್ತಾರೆ. ಹಾಗಿದ್ದರೂ ತಾಯಿ ಮಕ್ಕಳಲ್ಲಿ ವ್ಯಾವಹಾರಿಕ ವಿರಸ ವಿತ್ತೆಂಬುದು ತಿಳಿದು ಬರುತ್ತದೆ. ಆರ್ಥಿಕ ಅನಾನುಕೂಲತೆ ದೈಹಿಕ ಅನಾರೋಗ್ಯ ಇವುಗಳ ಮೂಲಕ ಮಧುರಚೆನ್ನರ ಚಿತ್ತವು ಆಗಾಗ ಪ್ರಬಲವಾಗಿ ವಿಕ್ಷೇಪಗೊಳ್ಳುತ್ತಲಿದ್ದಿತು. ಅಂಥ ಸಂದ ರ್ಭಗಳಲ್ಲಿ ಆಧ್ಯಾತ್ಮದೊಳಗಿನ ಇನ್ನೂ ಹೆಚ್ಚಿನ ಸ್ಥಿತಿಯು ಲಭಿ ಸದ ಹೊರತು ಗತ್ಯಂತರವಿಲ್ಲೆಂದು ದೇವದೇವನ ಪಂಥತೊಟ್ಟು ಆತ್ಮಹತ್ಯಕ್ಕೂ ಹವಣಿಸಿದ್ದುಂಟು. "ಆದರೆ ತಕ್ಕ ಹೊತ್ತಿಗೆ ವಿರುದ್ಧ ವಿಚಾರಗಳು ತಲೆದೋರಿದೊಡನೆಯೇ ಒಂದು ಅಲೌ ಕಿಕ ಚಮತ್ಕಾರ ನಡೆಯಿತು. ಎಂದೂ ಬಾಯಿಪಾಠ ಮಾಡಿರದ ಎರಡು ಶ್ಲೋಕಗಳು ತಲೆಯಲ್ಲಿ ಅಬ್ಬರದಿಂದ ಗದ್ದರಿಸಿ ಈತ ನನ್ನು ಮೂದಲಿಸಿ ನಡುಗಿಸಿಬಿಟ್ಟವು. ಈತನು ಕೂಡಲೇ ಈ ಶಕ್ತಿಯ ಅಬ್ಬರಕ್ಕೆ ಬೆರಗಾಗಿ. ಇನ್ನೆಂದಿಗೂ ಆತ್ಮಹತ್ಯಕ್ಕೆಳಿಸು ವದಿಲ್ಲವೆಂದು "ನಿನ್ನ ಇಚ್ಛೆ ಬಂದಾಗ ಕೃಪೆ ಮಾಡು" ಎಂದು ನಿರ್ಧಾರವಾಗಿ ನುಡಿಯುವನು." ಹೀಗೆ ಜ್ಞಾನಭಿಕ್ಷುವಾದ ಮಧು ರಚೆನ್ನರು ತಮ್ಮನ್ನು ತಾವು ಸಾಂತ್ವನಗೊಳಿಸಿಕೊಳುತ್ತಿದ್ದರು.

ಎರಡು ಸಲ ಆತ್ಮಹತ್ಯಕ್ಕೆ ಎಳಸಿದ ಮಧುರಚೆನ್ನರ ಆಧ್ಯಾತ್ಮ ಜೀವನವು ವಿಶಿಷ್ಟ ರೀತಿಯನ್ನು ಕಂಡಿತು. ಅಲ್ಲದೆ ಇದು ಅವರ ಮಹತ್ವಾಕಾಂಕ್ಷೆಯನ್ನು ಎತ್ತಿ ತೋರಿಸುತ್ತದೆ. ಹೀಗೆ ದೇವರ ಇರುವನ್ನರಿಯಬೇಕೆಂಬ ಹಂಬಲ ಮಧುರಚೆನ್ನ ರಿಗಿದ್ದುದು ಹೆಚ್ಚಿನ ಸದ್ಗುಣವೆಂದರೂ ಸಲ್ಲುವದು. ಸತ್ಯಸಂ ನನ್ನು ನೆರೆನಂಬಿ ಹಗಲಿರುಳು ಆತ್ಮಚಿಂತನೆ ಆತ್ಮಸಂಶೋಧ ಗಳಲ್ಲಿ ತೊಡಗಿ ಆತ್ಮಸಿದ್ಧಿ ಪುದ್ಧಿಗಳಿಗಾಗಿ ಪರಿತಪಿಸಿದ ಮ

ಸುಭಾಷಿತಗಳಲ್ಲಿಯ ಮಹಾಗುಣವೊಂದರಿಂದಲೇ ಅವರು ನಿಜ ಗುಣಿಗಳು. 'ನೀನ್ಯಾಕೊ ನಿನ್ನ ಹಂಗ್ಯಾಕೋ ಶ್ರೀಹರಿ' ಎಂಬ ಸ್ಥಿತಿಗೂ ಬಂದು ಮುಟ್ಟುವರು. ದೇವರ ನಾಮವೊಂದಿದ್ದರಷ್ಟೆ ಸಾಧಕರ ಸಿದ್ಧಿಗೆ ಸಾಕಾಗುತ್ತದೆ. 'ನೀ ಒಲಿ, ಒಲಿಯುದಿದ್ದರೆ ಮಾಣು. ನಾ ನಿಮ್ಮ ಪೂಜಿಸದಲ್ಲದೆ ಸೈರಿಸಲಾರೆನಯ್ಯಾ'. "ಕರಿಯನಿತ್ತೊಡೆ ಒಲ್ಲೆ ಸಿರಿಯನಿತ್ತೊಡೆ ಒಲ್ಲೆ, ಹಿರಿದಪ್ಪ ರಾಜ್ಯವಿತ್ತೊಡೆ ಒಲ್ಲೆ. ನಿಮ್ಮ ಶರಣರ ಸೂಳ್ನುಡಿಯನೊಂದರಗಳಿಗೆಯಿತ್ತೊಡೆ ನಿಮ್ಮನಿತ್ತೆ ಕಾಣಾ ರಾಮನಾಥಾ" ಎಂದು ಸತ್ಸಂಗ, ಸೂಳ್ನುಡಿಗಳನ್ನು ಸದಾ ಅಪೇಕ್ಷಿಸಿದ ವಚನಕಾರರ ವಚನ ಸುಧೆಯನ್ನು ಸವಿವ ಮಧುರಚೆನ್ನರೂ ಒಳ್ಳೆ ಸತ್ಸಂಗ ಸಾನಿಧ್ಯದಲ್ಲಿಯೇ ಇದ್ದರು. ಸಂಗದಿಂದಲ್ಲದೆ ಅಗ್ನಿ ಹುಟ್ಟದು, ಎಂಬುದನ್ನು ಬಲ್ಲ ಚೆನ್ನಮಲ್ಲರು ಒಂದು ಸಂಗವನ್ನು ಬಿಟ್ಟು ಇನ್ನೊಂದು ಸಂಗವನ್ನು ಹಿಡಿದರು. ಬಾಹ್ಯ ಪ್ರಪಂಚ ಸಂಬಂಧವ ವ್ಯಾಪಾರವನ್ನು ದಿನೇ ದಿನೇ ಕಡಿಮೆ ಮಾಡಿಕೊಳ್ಳುತ್ತ ಮಂಗಳಮೂರ್ತಿಯ ಸಂಗಮಾಡಿ ಲಿಂಗಸಂಗಿಯಾದರು. ಮಂಗಳಮೂರ್ತಿಯ ಹಂಗೂ ಅವರಿಗಿದ್ದಿಲ್ಲವೆಂಬುದನ್ನು 'ಸಲಿಗೆಯ ಸಲ್ಲಾಪ'ದಲ್ಲಿ ವ್ಯಕ್ತ ಪಡಿಸಿದ್ದಾರೆ.

'ಸಲಿಗೆಯ ಸಲ್ಲಾಪ' ಎಂಬ ಕವಿತೆ ಬರೆಯುವಾಗ ಭಗವತ್ ಸತ್ತೆಯ ಪ್ರಥಮ ಪರಿಚಯವಾಗಿದೆಯೆಂದು 'ಕಾಳರಾತ್ರಿ'ಯಲ್ಲಿಯೇ ಹೇಳಿದ್ದಾರೆ.

"ಎಲ್ಲೆಲ್ಲಿರುವೆಯೊ ಅಲ್ಲಲ್ಲೆಲ್ಲಾ ನಿನ್ನನು ಕಂಡೇನು. ವನವಲ್ಲಿದ್ದವ ಮನೆಯಲ್ಲಿಲ್ಲವೆ ವನಚರನೇ ನೀನು ?" ಎಂದು ಆತನ ಅಸ್ತಿತ್ವ ಸಮಸ್ತ ಭೂಮಂಡಲದ ತುಂಬೆಲ್ಲ ಇದ್ದು

ಆತನು ಹುಟ್ಟಿಸಿದರೆ ಹುಟ್ಟಿದೆನಲ್ಲದೆ ನನಗಿಲ್ಲಿತ್ತೇನು ? ಇರುವೆಯೋ ಇಲ್ಲೋ ನನಗೇನೆನಿಸದು. ಇದ್ದರೆ ದೊಣೆಯೇನು. ಇರುವಿಯೆಂದು ಸುಮ್ಮನೆ ಎನ್ನಲು ನಿನ್ನಪ್ಪನ ರಿಣವೇನು ?' ಎಂದು ಕಠೋರ ಹಾಡನ್ನು ಹಾಡುತ್ತ ನಂಬದೇ, ನೆಚ್ಚದೇ ಬರಿದೆ ಕರೆದರೆ ಓ ಎಂಬುವನೇ ಅವನು ? ಎಂದುದಕ್ಕೆ ಪ್ರತಿಯಾಗಿ ನಂಬುವದೇತಕೊ ಆಡದೆ ನೋಡದೆ ಎಂದ ಮಾತನ್ನು ಎತ್ತಿಕೊಂಡು ಹಿಂದಿನ ಕತೆಗಳನ್ನು ನಿನ್ನಯ ಕೀರ್ತಿಯನ್ನು ಪೊಗಳುವವಲ್ಲೊ, ಇಂದಿನ ಜಗದಿ ಆ ಶತಕೀರ್ತಿಯನ್ನು ಮಾಡಿ ತೋರಿಸು. ಇದ್ದರೇ ಬಂದೀ. ಇರದಿದ್ದರೆ ಬಿಟ್ಟೀ. ಇವರೊಳಗುಂಟಾದರೂ ಏನು ? ಇದ್ದಲ್ಲೆಲ್ಲ ಕಾಣಿಸಿಕೊಂಡರೆ ನಿನ್ನ ಗಂಟೇನಾದರೂ ಹೋಗುವುದೇ ?' ಎಂದು ನಿರ್ಭಿಡೆಯಿಂದ ಕೇಳಿದ್ದಾರೆ. ಸಾಧಕ ಜೀವಿ ಸಾವಿಗೆ ಹೆದರುವ ಹಳೇ ಹೇಡಿಯೇ! ಭಕ್ತನ ಬಲಿಗಾಗಿ ಗಾವಿಲರೆಲ್ಲರು ದೇವಿಲಿಯಾಗಬಲ್ಲರೆ ? ಹಾಗಿದ್ದರೆ ನಾ ಸತ್ತರೆ ಬಲು ನಗೆಗೇಡಾಗುವದೆಂದರಿತು ಅಂದಿನಿಂದ ಆತ್ಮಹತ್ಯಕ್ಕೆ ಮನಸ್ಸು ಮಾಡಲಿಲ್ಲ. 'ಚೆನ್ನಿಗರಾಯಾ' ಕಿವಿ ಮುಚ್ಚದಿರೋ, ನಿನ್ನಯ ಬೆಲೆಯನ್ನು ನೀನುಳಿಸಯ್ಯಾ; ನಿನ್ನ ದರುಶನವಷ್ಟಾದರೆ ಸೌಕಯ್ಯಾ', ಎಂದು ಪ್ರಾರ್ಥನೆ ಗೈದಿದ್ದಾರೆ. ಇದು 'ಮಧುರಚೆನ್ನ''ರ ಉತ್ಕಟೇಚ್ಛೆಯಾಗಿದ್ದಿತು. 'ಸಲುಗೆಯ ಸಲ್ಲಾಪ'ದಲ್ಲಿ ಪ್ರಾಮಾಣಿಕತೆ ನಿಷ್ಠುರತೆಯೊಡನೆ ವಿನಯವೂ ತುಂಬಿಕೊಂಡಿದೆ.

ನೈಜತೆಗಿಂಬಿಹುದಲ್ಲದೆ ನಟನೆಗೆ ಅಲ್ಲಿ ಸ್ಥಾನವಿಲ್ಲ. ಮಧುರಚೆನ್ನರ ಕವಿಶಕ್ತಿಯೇ ಅಂತಹದು. ಕೊನೆಯವರೆಗೂ ಅವರು ಆದರ್ಶವಾದಿ ವಿದ್ಯಾರ್ಥಿಗಳಾಗಿಯೇ ಇದ್ದರು. ಆದರ್ಶ

ವನ್ನು ಸಾಧಿಸಿಕೊಳ್ಳಲೆಂದು ಕಲ್ಲ ಮೇಲಿನ ಬರಹಗಳನ್ನು ತುಂಬ ಪ್ರಯತ್ನದಿಂದ ಓದಿದರು. ಯಾವ ಭಾಷೆಯು ಕೂಗಿಗೆ ದೇವ ದೇವನು 'ಓ' ಗೊಟ್ಟಾನೆಂದು ಹಂಬಲಿಸಿ ಹಲವು ಭಾಷೆಗಳನ್ನು ಅಭ್ಯಸಿಸುತ್ತ ಜಗತ್ತಿಗಿಳಿದ ಭಕ್ತಿಯು ಮಾತನ್ನೆಲ್ಲ ಪೌರ್ವಾತ್ಯ ಪಾಶ್ಚಿಮಾತ್ಯ ಶಾಸ್ತ್ರಗಳಲ್ಲಿ ಹುಡುಕಾಡಿದರು. ಗ್ರಾಮ ಸಾಹಿತ್ಯ ವನ್ನೆಲ್ಲ ತಿರುವಿಹಾಕಿ ವಚನ ಶಾಸ್ತ್ರವನ್ನು ನಿಟ್ಟಿಸುತ್ತ ಸಾಧನೆ ಗೈದರು. ದೇವನನ್ನು ಅರಿಸಲೆಂದು ಕೆರಳಿ ನಿಂತ ಭಕ್ತನಿಗೆ ಇತಿಹಾಸ ಕಾಣಿಸಿ, ಕಾವ್ಯಗೋಚರಿಸಿ, ಅಧ್ಯಾತ್ಮವು ಅಳವಟ್ಟಿತು ಕಲಿಗೆಯು ಸಲ್ಲಾಪವನ್ನೆತ್ತಿದಾಗ ಕಾಳರಾತ್ರಿ ಸಂಧ್ಯಾರಾಗವೆಂಬ ಭಾಗವು ಮುಗಿದಿದೆ. ವಿದ್ಯಾರ್ಥಿ ದಶೆಯಲ್ಲಿದ್ದಾಗಿನಿಂದ ಕೊನೆಯುಸಿರಿನವರೆಗೆ ಕೂಡಿಬಂದ ಸ್ನೇಹಿತರೆಂಬ ಸಸಿಗಳು ಒಂದೇ ಮಡಿಯಲ್ಲಿ ಬೆಳೆದವುಗಳಾದರೂ, ಬೀಜ ಧರ್ಮ ಬೇರೆ ಬೇರೆ. ಒಂದೇ ನೀರು ಗೊಬ್ಬರವುಂಡು ಬೆಳೆದರೂ ಆ ಗಿಡಗಳ ಎತ್ತರ, ಎಲೆ, ಟೊಂಗೆ, ಹೂ, ಕಾಯಿ ಬೇರೆ ಬೇರೆ. ಅವುಗಳ ರುಚಿ ಪರಿಣಾಮಗಳೂ ಬೇರೆ ಬೇರೆ ಇರುವಂತೆ ಉಳಿದೆಲ್ಲ ವೃಕ್ಷಗಳಿಗಿಂತಲೂ ಉತ್ತುಂಗವಾಗಿ ಬೆಳೆದು ಉತ್ತಮ ತತ್ವಾ ಮೃತ ಫಲಗಳನ್ನು ಬಿಟ್ಟ ಗಿಡವೆಂದರೆ ಇದೊಂದೇ. ಬೀಜಕ್ಕೆ ಬಿಡುವ ಕಾಯಿ ಲಕ್ಷಣವನ್ನು ಹೀಚಿನಲ್ಲಿಯೇ ಅರಿಯಬೇಕೆನ್ನುವ ದಕ್ಕೆ ಸಾಕ್ಷಿಯಾಗಿ ವಿದ್ಯಾರ್ಥಿಯಿದ್ದಾಗಿನ ಪ್ರವೃತ್ತಿಯೇ ಇವರಲ್ಲಿ ಬೆಳೆದು ಬಂದಿತು. ಝರಿಯಾಗಿ ಹೊರಟದ್ದು, ಹಳ್ಳವಾಗಿ, ಹೊಳೆಯಾಗಿ ವಿಶಾಲವಾಗುತ್ತ ನಡೆದು ತುಂಬುಹೊಳೆ– ಸಮ ನೆಲದಿ ಹರಿದ ಹೊಳೆ– ತಂಗೊಳವ ಅಮೃತ ಶಾಂತಿಯ ಸುಧೆ ಯನ್ನು ತೇಲಿಸಿಕೊಂಡು ಗಾಂಭೀರ್ಯವುಳ್ಳ ಸಾಗರದತ್ತ ಸಾಗಿತು.

# ೩. ಗೃಹಸ್ಥಾಶ್ರಮ

ತಾಯಿಯನ್ನುಳಿದು ಮತ್ತಾವ ಅತಿ ಸಮೀಪಸ್ಥ ಬಂಧು
ವರ್ಗವಿಲ್ಲದಿದ್ದರೂ ಮಿತ್ರವೃಂದದ ಒಲವು ಸಾಕಷ್ಟಿತ್ತು. ತಾಯಿ
ಯೊಬ್ಬಳೇ ಏಕಮಾತ್ರ ಪುತ್ರನನ್ನು ಜೋಪಾನ ಮಾಡಿಕೊಂಡು
ಬಂದಿದ್ದಳು. ಮಗುವಾದ ಚೆನ್ನಮಲ್ಲಪ್ಪನವರು ಕೇವಲ
ಆಧ್ಯಾತ್ಮ ಪರಾಯಣರಾಗಿದ್ದರು. ಕಾಲವೈಷಮ್ಯದ ಮೂಲಕ
ಮನೆತನವು ಸಾಲದಲ್ಲಿ ಮುಳುಗಿ ಹೋಗಿದ್ದಿತು. ಆದಕಾರಣ
ಹೊಲ ಮನೆಗಳ ಭಾರವನ್ನು ಸಂಪೂರ್ಣವಾಗಿ ಮೈಮೇಲೆ
ಹಾಕಿಕೊಳ್ಳುವ ಆಲೋಚನೆ ಮಾಡದೆ ರೈತರಿಗೆ ಕೊಟ್ಟು
ಬಂದಷ್ಟು ಉತ್ಪನ್ನದಿಂದ ಹೇಗಾದರೂ ಉಪಜೀವನವನ್ನು
ಸಾಗಿಸಬೇಕೆಂದು ಅನ್ನುತ್ತಿದ್ದರು. ಆದರೆ ಒಬ್ಬಳೇ ಬಹು ದಿನ
ಗಳಿಂದ ಬಾಳುವೆ ಮಾಡುತ್ತ ಬಂದಿದ್ದ ಅವರ ತಾಯಿಗೆ ಇಂಥ
ಮಾತು ಸಪ್ಪವಾಗಿ ತೋರುತ್ತಿದ್ದುದರಿಂದ ಆಕೆಯು ಸಮ್ಮತಿ
ಸುತ್ತಿದ್ದಿಲ್ಲ. ಆದ್ದರಿಂದ ಇಬ್ಬರಲ್ಲಿ ಯಾರಾದರೊಬ್ಬರು
ಹಿಂದಕ್ಕೆ ಸರಿಯದೆ ಗತ್ಯಂತರವಿಲ್ಲೆಂದು ಬಗೆದು ತಾವೇ ಈ
ಉಪಾಯದಂತೆ ನಡೆಯುತ್ತಿದ್ದರಾದ ಕಾರಣದಿಂದಾಗಿ ಕುಟುಂ
ಬದ ಸ್ಥಿತಿಯು ಹೆಚ್ಚು ಹೆಚ್ಚು ಕಷ್ಟಮಯವಾಗತೊಡಗಿತ್ತು.
ತಾಳ್ಮೆಯು ಮೇರೆ ಮೀರಿ ತೀರ ಕುತ್ತಿಗೆಗೆ ಬಂದುದರಿಂ
ತಾಯಿಯ ಕಾರಭಾರವನ್ನು ನಿಲ್ಲಿಸದ ಹೊರತು ಬೇರೆ ಮಾರ್ಗ
ವಿಲ್ಲವೆಂದೆನ್ನುವ ಹೊತ್ತೇ ಬಂದಿತು. ಆಗ ತಾವು ಹೇಳಬೇಕಾದ
ದನ್ನು ಹೇಳಿಬಿಟ್ಟರು. ಆದರೂ ಅವರ ತಾಯಿ ತಮ್ಮದೇ ಸ
ಯೆಂಬ ನಿಲುವಿನಿಂದ ಪರಿವರ್ತನೆ ಹೊಂದಿದ್ದುದು ಕಡಿಮೆಯೇ

ಚೆನ್ನಮಲ್ಲಪ್ಪನವರ ಜೀವನವು ಹಳ್ಳಿಗಾಡಿನಲ್ಲಿ ಅಗ್ನಿ ಕುಂಡದ ಮೇಲಿಟ್ಟಂತಹದಾಗಿದ್ದ ಮೂಲಕ ಅವರು ಬೇಗುದಿ ಗೊಳ್ಳುವಂತಾಗಿದ್ದಿತು. ತಾಯಿಮಕ್ಕಳ ನಡುವೆ ಅಸಮಾಧಾನ. ತಾಯಿ-ಹೆಂಡತಿಯರಲ್ಲಿ ವೈಮನಸ್ಸು- ಇವುಗಳಿಂದ ಮಧುರ ಚೆನ್ನರ ಬಾಳು ಗೋಳಾಗಿ ಪರಿಣಮಿಸಿತು. ಆದರೆ ಅದಕ್ಕೆಲ್ಲ ಅಂಜದ ಅಧ್ಯಾತ್ಮವೀರರಾಗಿದ್ದುದರಿಂದ ಒಂದು ದಿನ ತಾಯಿಯು ಕಾರಭಾರವನ್ನೆಲ್ಲ ಇಂದಿಗೆ ನಿಲ್ಲಿಸಿಬಿಡಬೇಕೆಂದು ಬಗೆದರು. ಬಲವಂತವಾಗಿ ಹೀಗೆಲ್ಲ ಮಾಡಿದರೆ ತಾಯಿಯು ರಂಭಾಟ ಹೆಚ್ಚಿ ಮನೆಯು ಮಲ್ಲಶಾಲೆಯಾಗುವ ಹೊತ್ತು ಬರುವುದಲ್ಲಾ ಎಂದು ಚಿಂತಿಸಿ ಅವಳ ಸಮ್ಮತಿಯಿಂದಲೇ ಹೇಗಾದರೂ ಕಾರ್ಯವನ್ನು ಸಾಧಿಸಿಕೊಳ್ಳಬೇಕೆಂದು "ಅಮ್ಮಾ ಬಹು ದಿನ ನಿನ್ನ ಮಾತಿಗೆ ಅಡ್ಡ ಬರಲಿಲ್ಲ. ಇದನ್ನು ನೆನೆದು ಈಗ ನೀನು ನನ್ನ ಮಾತನ್ನು ನಡೆಸಿಕೊಡು" ಎಂದರು. ಸದಾ ಧ್ಯಾನ, ಮೌನ, ಆತ್ಮಚಿಂತನೆಗಳಲ್ಲಿ ಆಸಕ್ತಿಯುಳ್ಳ ಚೆನ್ನಮಲ್ಲಪ್ಪನವರಿಗೆ ತಾಯಿಯಿಂದ ಸಿಕ್ಕ ಉತ್ತರವೆಂದರೆ, "ನಿನ್ನ ಕೈಯಿಂದ ಗಳಿಸುವ ಕೆಲಸವಾಗಲಾರದ್ದಕ್ಕೆ ನೀನು ನನ್ನ ಅಧೀನನಾಗಿದ್ದಿ. ಇದರಲ್ಲಿ ನನ್ನ ಮೇಲೆ ನಿನ್ನ ಉಪಕಾರವೇನು ?" ಎಂಬುದು ಮಾತ್ರ. ತಾಯಿಯ ಈ ವರ್ತನೆಯಿಂದ ಅವರ ಮನಸ್ಸಿಗೆ ನೋವುಂಟಾದರೂ ಸಹಿಸಿಕೊಂಡಿದ್ದರು, ಒಳ್ಳೆಯ ದಿನಗಳಿಗಾಗಿ ಕಾಯುತ್ತ ಕೊಂಡಿದ್ದರು.

ಮಧುರಚೆನ್ನರ ಜೀವನದ ಒಂದು ಘಟ್ಟದಲ್ಲಿ ಪ್ರತಿಕೂಲತೆಯ ಸುರಿಮಳೆಯೇ ಸುರಿಯಿತು. ಆನುವಂಶಿಕ ವ್ಯಾಧಿಯಿಂದ ಮೇಲಿಂದಮೇಲೆ ಮಧುರಚೆನ್ನರಿಗೆ ಉಂಟಾಗುತ್ತಿದ್ದ ಅನಾ

ರೋಗ್ಯ, ಸರಿಯಾದಾದರೆ ಸಹಧರ್ಮಿಣಿಗೆ ಒಂದಕ್ಕೆ ಬದಲು ಎರಡು ಮಕ್ಕಳ ಹೆರಿಗೆ. ಹೀಗಿದ್ದರೂ ತಾಯಿಯು ಇವರ ನೆರವಿಗೆ ಬರದಾದಳು. ಮುಂಚೆ ಹುಟ್ಟಿದ ಇನ್ನೆರಡು ಮಕ್ಕಳಿಗೂ ಸದಾ ಬೇನೆ ಬೇಸರಿಕೆ ತಪ್ಪಿದ್ದಲ್ಲ. ಅವರು ವ್ಯವಹಾರದ ಧರ್ಮಾಚಾರಗಳನ್ನು ಸ್ವಬುದ್ಧಿಗೆ ತಿಳಿಯದೆ ಎಷ್ಟೋ ಪಾಲಿಸ ಲಾರೆನೆಂದು ಪಂಥತೊಟ್ಟಿದ್ದರಿಂದ ಸುತ್ತುಮುತ್ತಲೆಲ್ಲ ಸಾಮಾ ಜಿಕ ಹಾವಳಿ, ದುಡ್ಡಿನ ಕಷ್ಟವಂತೂ ತಪ್ಪಲಿಲ್ಲ. ಆಗ ಅವರು ದಿಕ್ಕುಗೆಟ್ಟು ದೇವ ದೇವನಿಗೆ ಮೊರೆಯಿಡತೊಡಗಿದರು. “ತಂದೆ; ಹೀಗೆ ಕೈಕಾಲು ಕಟ್ಟಿ ಹೊಡೆತ ಕೊಟ್ಟರೆ ನಾನು ಹೇಗೆ ತಾಳೇನು; ನನಗೆ ಏನು ಮಾಡೆನ್ನುತ್ತೀ! ನಿನ್ನ ಇಚ್ಛೆಯೇ ತಿಳಿ ಯದು. ಮೇಲೆ ಏಟುಗಳು ಅಪರಿಮಿತ. ಹಿಂದೆ ಮುಂದೆ. ಈಚೆ ಆಚೆ.ಮೇಲೆ ಕೆಳಗೆ ಎಲ್ಲ ಕಡೆಗೆ ಮುಳ್ಳುಗಳನ್ನಿಟ್ಟು ಪಸಡೆ ಹರಿಯುವಂತೆ ಕಡಿವಾಣಗಳನ್ನು ಜಗ್ಗಿದರೆ ನಾನೆಲ್ಲಿ ಹೆಜ್ಜೆ ಚೆಲ್ಲಲೀ!” ಎಂದು ಪ್ರಲಾಪಿಸತೊಡಗಿವರು. ಇಂತಹ ಪ್ರಸಂಗ ಗಳಲ್ಲಿ ಅವರಿಗೆ ಮಹತ್ವದ ಆಧ್ಯಾತ್ಮಿಕ ಗ್ರಂಥವು ಹೊಸದಾಗಿ ಓದಲಿಕ್ಕೆ ಸಿಕ್ಕರೆ ಎಲ್ಲವನ್ನೂ ಮರೆಯುವರು. ಕೇವಲ ಪರ ಮಾತ್ಮನ ನಾಮಸ್ಮರಣೆಯೊಂದನ್ನೇ ಅನುಸರಿಸಿದ ಭಕ್ತಿಮಾರ್ಗ ದಲ್ಲಿ ಭಕ್ತ ಸಾಧಕರ ಜೀವನದಲ್ಲಿ ಬರುವ ವಿವಿಧ ಅನುಭವಗಳ ವರ್ಣನೆಯುಕ್ತ ಪುಸ್ತಕಗಳು ಲಭ್ಯವಾದರಂತೂ ಇಹಲೋಕ ವನ್ನೇ ಮರೆತು ಪರಮಾನಂದದಲ್ಲಿ ಲೀನರಾಗುವರು.

ಜ್ಞಾನಭಿಕ್ಷುವಾದ ಚೆನ್ನಮಲ್ಲಪ್ಪನವರ ಜೀವನವು ಈ ರೀತಿ ಸಾಗಿದ್ದರಿಂದಲೇ ಅವರು ಸಾಧಕ ಶರಣರಾದರು. ಸಹನೆಯ ಆಗರವಾದರು. ಸಿದ್ಧಪುಂಗವರಾಗಿ ಪರಮಪುರುಷ

ನಿತ್ಯತೃಪ್ತರಾದರು. "ಆಗುವುದೇನಿದೆಯೋ ಅದು ಬಂದೇ ಬರುತ್ತಿರುತ್ತದೆ. ಆದರೂ ನಮ್ಮ ಬುದ್ಧಿಯ ಉಪಯೋಗ ವನ್ನು ನಾವು ನಿರಾಸಕ್ತರಾಗಿ ಮಾಡಿಕೊಳ್ಳಲೇಬೇಕು", ಇದು ಮಧುರಚೆನ್ನರ ಆತ್ಮಚರಿತ್ರೆಯಲ್ಲಿ ಬಂದ ಚತುರ್ಮುಖ ಸಿದ್ಧಾಂತದ ಮಾತು. ಸಮಾಧಾನವನ್ನು ಮೈದಾಳಿಸಿಕೊಂಡು "ಸಂಕಲ್ಪಿಸು. ಆದರೆ ಫಲವನ್ನು ದೇವನ ಕಡೆಗೆ ಬಿಟ್ಟುಕೊಡು" ಎಂದು ಗುರು ಅರವಿಂದರು ಹೇಳಿದ ಗೀತೆಯಲ್ಲಿಯ ವಾಕ್ಯ ವನ್ನು ಪಠಿಸುತ್ತ ಅವರು ಜೀವನ ನೌಕೆಯನ್ನು ನಡೆಸಿದರು.

ವಿಜಾಪೂರ ಜಿಲ್ಲೆಯಲ್ಲಿ ಹಲಸಂಗಿಯು ಸೃಷ್ಟಿ ಸೌಂದ ರ್ಯಕ್ಕೆ ಹೆಸರಾಗಿದೆ. ಹಲಸಂಗಿಯ ನವಿಲುಗಳಂತೂ ನಾಡಿನಲ್ಲಿ ಸುಪ್ರಸಿದ್ಧ. ಆ ಊರ ಸಮೀಪದಲ್ಲಿ ಮಾವಿನ ತೋಪು ಇದೆ. ಸಂಸಾರದಲ್ಲಿಯ ಕಷ್ಟನಷ್ಟಗಳನ್ನು ತಾಳುವುದಲ್ಲದೇ ಆನು ವಂಶಿಕ ಕ್ಷಯಸದೃಶವೆಂಬ ಮಧುರಚೆನ್ನರೇ ಹೇಳಿದ ರೋಗ ವೊಂದು ಗಂಟುಬಿದ್ದುದರಿಂದ ಆರೋಗ್ಯ ಸುಧಾರಿಸಲೆಂದು ವಿರಾಮ, ವಿಹಾರಕ್ಕಾಗಿ ಹಾಗೂ ಜ್ಞಾನಾರ್ಜನೆಗಾಗಿ ತೋಪಿಗೆ ಪುನಃ ಪುನಃ ಹೋಗಿ ಗುಡಿಸಲಿನಲ್ಲಿರುತ್ತಿದ್ದರೆಂಬ ವಿಷಯ 'ಕಾಳರಾತ್ರಿ','ಬೆಳಗು' ಗ್ರಂಥಗಳಲ್ಲಿ ಬರುತ್ತದೆ. ಅಲ್ಲಿಯ ಸುಖ ಮಯ ಜೀವನವನ್ನು ಕೆಲವೊಂದು ದಿವಸ ಅನುಭವಿಸಿ ಚೇತನ ಪಡೆದು ಮರಳಿ ಹಳ್ಳಿಯಡೆಗೆ ಧಾವಿಸುತ್ತಿರುವುದಕ್ಕೆ ಅಮೂಲ್ಯ ಗ್ರಂಥಗಳಲ್ಲಿ ಮೂರು ಕಾರಣಗಳನ್ನು ಗ್ರಂಥಕರ್ತರು ಹೇಳಿ ದ್ದಾರೆ. ಮೊದಲನೆಯದಾಗಿ, ಅವರಿಗೆ ಧ್ಯಾನ, ಮೌನಗಳಿಗೆ ಪ್ರಶಾಂತವಾತಾವರಣವುಳ್ಳ, ಈ ಕಲಕುಮಲಕಿನ ವ್ಯವಹಾರಿಕ ಜೀವನದಿಂದ ದೂರವಿದ್ದ ಸ್ಥಳವೊಂದು ಬೇಕಾಗಿದ್ದಿತು. ಎರಡನೆ

ಯದಾಗಿ, ಮನೆಯೊಡತಿ ಪತ್ನಿ ಹಾಗೂ ಹೊಲದೊಡತಿ ತಾಯಿ ಇವರೀರ್ವರಲ್ಲಿ ಉದ್ಭವಿಸುತ್ತಿದ್ದ ಕಲಹಗಳಿಂದ ದೂರವಿರಲು ಬಯಸುತ್ತಿದ್ದರು. ಅತ್ತೆ ಸೊಸೆಯರೀರ್ವರೇನೂ ಹೊಸಬರಲ್ಲ. ಮಧುರಚೆನ್ನರ ತಾಯಿಯು ಮಲ ತಮ್ಮನ ಮಗಳಾದ ಅನಾಥೆ. ಲಗ್ನವಾದ ನಂತರ ಆ ಮನೆತನದ ಸಂಬಂಧದಿಂದಲೇ ಕಲಹಗಳು ಮೇಲಿಂದ ಮೇಲೆ ಬೆಳೆಯುತ್ತಿದ್ದವು. ಬೀಗ–ಬೀಗತಿಯರಲ್ಲಿಯ ವ್ಯಾಜ್ಯದ ಪರಿಣಾಮವು, ಪಾಪ ಬಡ ಪ್ರಾಣಿ ಸೊಸೆಯ ಮೇಲೆ ಆಗುತ್ತಿದ್ದಿತು. ಸತೀ ಧರ್ಮವನ್ನು ವ್ಯಕ್ತ ಮಾಡುತ್ತ ಅಳು ನುಂಗಿ ನಗು ತಂದುಕೊಂಡು ಸದಾ ತನ್ನ ಪತಿ ಸೇವೆಯಲ್ಲಿ ನಿರತಳಾದ ಬಸಮ್ಮನಿಗೆ ಕೆಲವೊಂದು ದಿನವಾದರೂ ಕಷ್ಟಕೊಡುವವನ್ನು ನಿಲ್ಲಿಸಬೇಕೆಂದು ಇವರು ತೋಪಿಗೆ ಹೋಗುತ್ತಿದ್ದರು. ವೈದ್ಯಕೀಯ ಸಲಹೆಯಂತೆ ಪರಿಶುದ್ಧ ಗಾಳಿ. ಪ್ರಶಾಂತವಾದ ವಾತಾವರಣವನ್ನು ಸವಿಯಲು ಅನಿವಾರ್ಯವಾಗಿ ತಾವು ಬಯಸಿದ ಮಾವಿನ ತೋಪಿಗೆ ಹೋಗಿ ನೆಲೆಸುತ್ತಿದ್ದರು. ಈ ಮೂರು ಕಾರಣಗಳ ಮೂಲಕ ಮಾಮರದ ವನ ಸೇರಿ ತಮ್ಮ ಇಷ್ಟಾರ್ಥವನ್ನು ಚೆನ್ನಮಲ್ಲಪ್ಪ ಸಾಧಿಸುತ್ತಿದ್ದರು.

ನಿರುತ್ಸಾಹವನ್ನು ಹೊಡೆದೋಡಿಸಿ ಜೀವನೋತ್ಸಾಹವನ್ನು ಪಡೆದು ಅನೇಕ ಗ್ರಂಥಾವಲೋಕನದಿಂದ ಆಧ್ಯಾತ್ಮಜ್ಞಾನ ಪಿಪಾಸೆಯನ್ನು ತಣಿಸಿಕೊಂಡು, ಆರೋಗ್ಯ ಸಂಪಾದಿಸಿಕೊಂಡು, ಮನೆಗೆ ಮರಳುವದು ಜ್ಞಾನಭಿಕ್ಷು ಮಧುರಚೆನ್ನರಿಗೆ ರೂಢಿಯಾದಂತಾಯಿತು. ಸುಗ್ಗಿಯ ಸಮಯದಲ್ಲಂತೂ ಈ ತೋಪೇ ಅವರ ನಿವಾಸವಾಗುತ್ತಿದ್ದು ವರ್ಷದ ಬಹು ಭಾಗವನ್ನು ಅಲ್ಲಿಯೇ ಕಳೆಯುತ್ತಿದ್ದುದರಿಂದ ಮರಣವನ್ನು ದೂರ

ದೂರ ಸರಿಸುತ್ತ ನಿತ್ಯಾನಂದರಾಗುತ್ತಿದ್ದರು. ಅವರು ವನ್ಯ ಹಿಂಸ್ರಪ್ರಾಣಿಗಳಿಗಿಂತ ಸುತ್ತ-ಮುತ್ತಲಿನ ಗೋಮುಖವ್ಯಾಘ್ರ ಜನತೆಗೆ ಬಹಳಷ್ಟು ಅಂಜಿ ಅಡವಿಯನ್ನು ಸೇರುವ ಪ್ರಸಂಗವು ಬರುತ್ತಿದ್ದಿರಬೇಕೆಂಬುದು ಇನ್ನೊಂದು ಕಾರಣ. ತಾಯಿಯೊಡನೆ ಮೌನದಿಂದಿರಲಾರಂಭಿಸಿದ ಪರಿಣಾಮವಾಗಿ ಗೃಹಕಲಹಗಳು ಕಡಿಮೆಯಾಗಿ ಸದನದಲ್ಲಿ ಶಾಂತಿ ನೆಲೆಸುವಂತಾಯಿತು. ಮನೆಯನ್ನು ಮಡದಿಗೂ, ಭೂಮಿಯನ್ನು ತಾಯಿಗೂ ಕೊಟ್ಟು ವನಕ್ಕೆ ಹೋಗಿ ಮರಳಿ ಬರುವಾಗ ವಿಚಾರ ಮಾಡಿಕೊಂಡು ಬಂದರು. ಸಾಧ್ವಿ ಸತಿ ಬಸಮ್ಮನವರಿಂದ ಜೀವನವನ್ನು ರೂಪಿಸಿಕೊಂಡು ಮಧುರಚೆನ್ನರು ಸಹನೆಯ ಖಣಿ ಸಹಧರ್ಮಿಣಿಯವರನ್ನು ಬಹಳೇ ಹೊಗಳಿದ್ದಾರಲ್ಲದೆ, ಆ ಸಾಮರಸ್ಯ ಸುಂದರ ಜೀವನದ ಭಾಗವನ್ನು 'ರೋಹಿಣಿ' ಎಂಬ ಶಿರೋನಾಮೆಯ ಪದ್ಯದಲ್ಲಿ ಹೆಣೆದಿದ್ದಾರೆ. ಬೀಗ ಬೀಗತಿಯರು ಜಗಳ ನಡೆಸಿದರೆ ಬಸಮ್ಮ ಕದ ಹಾಕಿಕೊಂಡು ಪತಿ ಹೇಳಿಕೊಟ್ಟ ಮಂತ್ರ ಪಠಿಸುತ್ತ ಅವರಿಗಾಗಿ ಸುಖ ಕೋರುತ್ತ ಅಟ್ಟದ ಮೇಲಿರುತ್ತಿದ್ದರಂತೆ. ಚೆನ್ನಮಲ್ಲಪ್ಪ ತನ್ನ ಜೀವನದ ಗುರಿ ಐಕ್ಯವೇ ಹೊರತು ವಿಚ್ಛೇದನವಲ್ಲವೆಂಬುದನ್ನು ತೋಪಿನಿಂದ ಮನೆಗೆ ಮರಳುವಾಗ ಅರಿತುಕೊಂಡರು. ಮೊದಲು ಸತಿಯು ಗೂಡ ಐಕ್ಯ ಸಾಧಿಸಬೇಕೆಂದರಿತಿರುವದಕ್ಕೆ ಕಾರಣವನ್ನು ಕೊಟ್ಟಿದ್ದುಂಟು. ಸಾಮರಸ್ಯ ಹೊಂದದೆ ಸೋತವರು ಬೈರಾಗಿಗಳಾಗಬಹುದು. 'ಮನೆಯವರೆಲ್ಲರೊಡನೆ ಐಕ್ಯದಿಂದಿರಲು ಅಪೇಕ್ಷಿಸುವದೊಳಿತು. ಇದಲ್ಲದೇ ಐಕ್ಯತೆ (ಸರ್ವಸಿದ್ಧಿಗಳು) ಕಾನನದ ಬೆಳದಿಂಗಳಂತೆ ವ್ಯರ್ಥ. ಕೊನೆಗೆ ಸಮಾನಶೀಲರಾದ ಸ್ನೇಹಿತ

ರೊಡನೆ ಐಕ್ಯತೆಯನ್ನು ಕಲಿಯುವದು ಬೇಕಾಗಿಲ್ಲ. ತಂತಾನೆ ಅದು ಬರಬಲ್ಲದು.' ಎಂದು ಮಧುರಚೆನ್ನರು ತಿಳಿದು, ಮನೋನಿರ್ಧಾರದಿಂದ ಸತಿಯನ್ನು ಆಧ್ಯಾತ್ಮದತ್ತ ಹೊರಳಿಸಲು ಇದೊಂದು ಸಲ ಪ್ರಯತ್ನಿಸೋಣವೆಂದು ಮನೆಗೆ ತೋಪಿನಿಂದ ಬರಲು ಅಲ್ಲಿ ಆಗಲೇ ಆಶ್ಚರ್ಯಕಾರಕ ಕೆಲಸಗಳಾಗಿ ಹೋಗಿದ್ದವು.

ಬಾರೇ ಗೆಳತಿ
    ಒಳಗೇ ಕುಳಿತಿ
ಅಟ್ಟಾ ಏರಿ ಮೇಲೆ ನಿಂತಿ
    ಕದಾಗಿದ ನೂಕಿಕೊಂಡು
ಚಿಲಕಾ ಗಿಲಕಾ ಹಾಕಿಕೊಂಡು
    ಅಲ್ಲೇ ಕುಳಿತಿ
ಬಾರೇ ಗೆಳತಿ.
    ನೀ ಕೂತಲ್ಲಿ ಜ್ಯೋತಿಧಾಳ
ನಾ ಕೂತಲ್ಲಿ ಕತ್ತಲೆ ಕಾಳ
    ಕಂಡೂ ಕಂಡೂ ಕೂತೇ ಕೂತಿ
ತಿಳಿದೂ ತಿಳಿದು ಹಾಗೇ ಇರತಿ
    ಅಲ್ಲೇ ಕುಳತಿ ಬಾರೇ ಗೆಳತಿ.

ಎಂದು ಸತಿಯನ್ನು ಪ್ರೀತಿಪೂರ್ವಕವಾಗಿ ಕರೆದರು. ಮುಖಕ್ಕೆ ಮುಸುಕಿಟ್ಟುಕೊಂಡು ನಿತ್ಯ ಮಧುರಚೆನ್ನರಿಗಾಗಿ ಮಿಡಕಿ ಮರುಗುತ್ತಿದ್ದ ಉದಾತ್ತ ಜೀವನದ ಸತಿಯನ್ನು ಕಂಡು ಅವರು ಹರ್ಷಗೊಂಡರು. 'ಇನ್ನು ನೀವು ತೋಪಿಗೆ ಹೋಗಬಾರದು. ನಿಮ್ಮಂತೆ ನನಗೂ ಉಂಟಾದ ಹಸಿವೆಯನ್ನು

ಂಗಿಸಲು ಇಲ್ಲೇ ಇರಿ. ಇನ್ನುಳಿದ ಕಾಲದಲ್ಲಿ ಜೊತೆ ಜೊತೆ ರಾಗಿ ಬಾಳಿ, ಬಾಳನ್ನು ಇನ್ನೂ ಚೆನ್ನಾಗಿಸೋಣ. ನೀವು ನಿಮ್ಮ ೋಟದಲ್ಲಿ ನಾನು ನನ್ನ ಕೊಂಪೆಯಲ್ಲಿ ಉಳಿದರೆ ಇದು ಾಧಿಸದು. ಕೊಂಪೆ ನನಗೆ ಜನ್ಮಗಂಟಾಗಿರಲು ತೋಟ ನಿಮಗೆ ಚ್ಚಿಗಂಟಾಗಬಾರದು. ಅತ್ತೆ ಕೊಡುವ ಕಾಟ ಬೇರೆ; ಮತ್ತೆ ಡ್ಡ ಗುಡ್ಡ ಬೇರೆ. ತೂಗದಂಥ ದಗದ ನನಗೆ, ನೀಗದಷ್ಟು ಲಸ ನಿಮಗೆ ಇರುವಾಗ ಧೀರತೆಯಿರದ ಬಾಲೆ ನಾನು. ಘೋರ ಂಭೀರ ನೀನು. ಕೂಡಿ ನಡೆಯಬೇಕಾದುದಕ್ಕೆ ನಿನ್ನ ನೋಡಿ ಲಿಯುವಾಶೆ. ನಿನ್ನ ಕೂಡಿ ಕಲಿಯುವಾಶೆಯೂ ಇದ್ದ ಕಾರಣ ನ್ನ ಸಾನಿಧ್ಯವನ್ನು ಸದಾ ಬಯಸಿರುವೆ. ಮರಳಿ ಮಾಮರದಡಿ ೀರಬೇಡಿರೆಂದು' ಮಡದಿ ಅಂಗಲಾಚಿ ಕೇಳಿಕೊಂಡಿದ್ದಕ್ಕೆ ಜ್ಞಾನ ಕ್ಷು ಚೆನ್ನಮಲ್ಲಪ್ಪ ಸಮ್ಮತಿಸುತ್ತಾರೆ. ಮಾತೆಯೂ ಸಂತ ೂಸೆಯರೊಂದಿಗೆ ಕೂಡಿ ಇರಬಯಸುತ್ತ ಮೊಮ್ಮಕ್ಕಳ ಾಲನೆ ಪಾಲನೆ ಮಾಡುವುದರಲ್ಲಿ ಮುಂದಾಗುತ್ತಾಳೆ. 'ಐಯ್ಯೋ ಹಿ ತಾಯಿ ಎಂದು ಸತ್ತಾಳು ಎನ್ನುವದು ನಿಂತು ಸತಿ, ುಟುಂಬ, ಸಂಘ, ಸಮಾಜ ಇವುಗಳಲ್ಲಿಯೇ ನಮ್ಮ ಜೀವನ ಾಫಲ್ಯಕ್ಕೆ ಇಂಬು ದೊರೆಯಬೇಕಲ್ಲದೆ ಅರಣ್ಯದ ಗಿರಿ ಗಹ್ವರ ಳಲ್ಲಿ ಅಲ್ಲ' ಎಂದು ಅನುಭವವಾಣಿಯಿಂದ ಮಧುರಚೆನ್ನರು ಡಿದರು. ಮಹಾ ಆಧ್ಯಾತ್ಮಜೀವಿ ಚೆನ್ನಮಲ್ಲಪ್ಪ ಹಾಗೂ ವರ ಆದರ್ಶಸತಿ ಭಾಗ್ಯಶ್ರೀ ಬಸವಮ್ಮ (ಜ್ಞಾನಭಿಕ್ಷು, ೋಹಿಣಿ) ಇವರೀರ್ವರನ್ನು ಕ್ಷಣಮಾತ್ರವೂ ಬಿಟ್ಟಗಲದೆ ಜ್ಞಾನ ಕ್ಷುವಿನ ನೆರಳಿನಂತೆ ಹಿಂದುಗೊಂಡು ಬಂದ ಮಂಜುಳನ ಾತ್ರ ಸೃಷ್ಟಿಯಲ್ಲಿಯೂ ನೈಜತೆ ತುಂಬಿಕೊಂಡಿದೆ. ರೋಹಿಣಿ

ಯುಂತೇ, ಮಂಜುಳನು ಸಹಾ ಜ್ಞಾನಭಿಕ್ಷುವಿನ ಸೇವೆಯಲ್ಲಿ ನಿರತನಾಗಿ ಚಾಚೂ ತಪ್ಪದೆ ಅಚಲವಾದ ಶ್ರದ್ಧೆಯಿಂದ ಕಾರ್ಯ ನಿರ್ವಹಿಸುತ್ತಾನೆ. ಶ್ರೀ ಸಿಂಪಿ ಲಿಂಗಣ್ಣನವರೆಂದಂತೆ "ಐದು ವರ್ಷ ಹೊಂದಿಕೊಂಡಿದ್ದು ಬಾಳ ಕೃಷಿ ಮಾಡಿದವರಲ್ಲಿ ಅವರ ಜೊತೆಗಾರ್ತಿ ಬಸವಮ್ಮ, ಮಧುರಗೀತೆಗೆ ಕಾರಣನಾದ ಮಧು, ದಣಿವಿಲ್ಲದೆ, ಕುಣಿಯು ಕರೆದವನು ನಾನು, ಈ ಮೂವರು ಅವರ ಸಂಗಡಿಗರು." ಇವರು ಮಧುರಚೆನ್ನರ ಕೊನೆಯುಸಿರಿನ ವರೆಗೂ ಸಂಗಡಿದ್ದುದಕ್ಕೆ ಅವರ ಅನುಪಮ ನಿರ್ವ್ಯಾಜವ ವ್ಯಕ್ತಿತ್ವವೇ ಕಾರಣ. ಅವರು ಆದರ್ಶ ಗೆಳೆಯರಾಗಿಯೂ ಬಾಳಿದರು.

ಕರ್ನಾಟಕ ಕಾಲೇಜಿನ ಕರ್ನಾಟಕ ಸಂಘದ ಆಶ್ರಯದಲ್ಲಿ ಏರ್ಪಟ್ಟ ಮಧುರಚೆನ್ನರ ಕುರಿತಾದ ವಿಚಾರ ಸಂಕಿರಣದ ಸಮಯದಲ್ಲಿ ಶ್ರೀ ವಿನೀತ ರಾಮಚಂದ್ರರಾಯರು ಮಧುರಚೆನ್ನರ ಜೀವನ ವೃತ್ತಾಂತವನ್ನು ವಿವೇಚಿಸುತ್ತ, "ಮದುವೆಯ ನಂತರವೂ ಮಗುವಿನಂತೆಯೇ ಇದ್ದ ಇವರ ವ್ಯಕ್ತಿತ್ವವನ್ನು ವಿಕಾಸ ಮಾಡಿದವರೆಂದರೆ ಅವರ ಪತ್ನಿಯಾದ ಸಾಧ್ವಿ ಬಸವಮ್ಮನವರು." ಎಂದು ಹೇಳಿದುದು ತೀರಾ ಸತ್ಯವಾದ ಮಾತು. ಸಾವರಿಸಿಕೊಂಡು ಮೇಲಕ್ಕೇಳಬೇಕೆಂದವರಿಗೆ ಸಹಾಯಕವಾಗಿ ಬೇರೊಬ್ಬರ ನೆರವು ಅತ್ಯವಶ್ಯ. ಸಾಧಕನಿಗೆ ಬಾಹ್ಯ ಸಾಧನವೊಂದು ಲಭ್ಯವಾದರೆ ಆತನ ಪ್ರಗತಿ ಕುಂಠಿತವಾಗದು. ಬುದ್ಧದೇವನು ಮಧ್ಯರಾತ್ರಿಯಲ್ಲಿ ಮೋಹದ ಮಡದಿಯನ್ನು ಮುದ್ದಿನ ಮಗುವನ್ನು, ಮಹಾ ಸಾಮ್ರಾಜ್ಯವನ್ನು ತ್ಯಜಿಸಿ ಹೊರಡಲಣಿಯಾದಾಗ್ಗೆ (ಸೇವಕ) ಸಾಥಿ ಚೆನ್ನನು ನೆರವಿಗೆ

ಬಂದವನು. ವೀರಶೈವ ನಿರ್ಮಾಯಕ ಶ್ರೀ ಬಸವಣ್ಣನು ಮನೆ ತೊರೆದಂದಿನಿಂದಲೂ ಹಿಂಬಾಲಿಸಿ ತಮ್ಮನ ಯೋಗಕ್ಷೇಮವನ್ನು ಕುರಿತು ಬಸವನ ಸರ್ವಸ್ವವೇ ತನ್ನ ಸರ್ವಸ್ವವೆಂದು ಬಂದ ಅಕ್ಕ ನಾಗಲಾಂಬಿಕೆ ಬಸವನು ಭಕ್ತಿಭಂಡಾರಿಯಾಗಲು ಕಾರಣೀಭೂತಳಾದಳು. ಸತಿಮಣಿ ನೀಲಲೋಚನೆಯಂತೂ ಬಸವೇಶ್ವರನ ಆಂತರಿಕ ವಿಕಾಸಕ್ಕೆ ಕಾರಣಳಾದಳು. ಗಾಂಧೀಜಿಯವರು ಮಹಾತ್ಮರಾಗಲು ಕಸ್ತೂರಬಾಮಾತೆಯೇ ಮುಖ್ಯರಾದರು.

ಹತ್ತಿರದ ಸ್ನೇಹಿತರಲ್ಲದೆ ಅವಕ್ಕೂ ಮಿಗಿಲಾಗಿ ಅವರ ಧರ್ಮಪತ್ನಿ ಸೌ. ಬಸವಮ್ಮನವರೇ ಚೆನ್ನಮಲ್ಲರು ಆಧ್ಯಾತ್ಮ ವೀರರಾಗಲೂ ಸಾಧಕಚರಣರಾಗಲೂ ಕಾರಣರಾದರು. ಸತಿಪತಿಗಳು ಕೂಡಿ ಮಾಡುವ ಭಕ್ತಿ ಹಿತವಾಗಿಪ್ಪುದು ಶಿವಂಗೆ ಎಂಬುದು ಸತ್ಯ. ಗಂಡ ಶಿವಲಿಂಗ ದೇವರ ಭಕ್ತನಾಗಿ ಹೆಂಡತಿ ಮಾರಿ ಮಸಣೆಯ ಭಕ್ತಳಾದರೆ ಹೆಂಡದ ಮಡಿಕೆಯನ್ನು ಹೊರಗೆ ತೊಳೆದಂತೆ. ಭವಸಾಗರದಲ್ಲಿ ಬಂದು ಬಿದ್ದ ದೇಹಭಾಂಡೆಯನ್ನು ತೊಳೆಯಲು ಸತಿ-ಪತಿಗಳೀರ್ವರೂ ಕೂಡಿ ಕೈಯಾಡಿಸಿದಾಗ್ಗೆ ಸ್ವಚ್ಛವಾಗುತ್ತದೆ. ಸ್ವಚ್ಛಂದವಾಗಿ ಬೆಳಗಿದರೆ 'ಲಕಲಕ' ಹೊಳೆಯಬಲ್ಲದು. ಚೆನ್ನಮಲ್ಲಪ್ಪನವರ ದೇಹಭಾಂಡೆಯನ್ನು ಚೆನ್ನಾಗಿ ಬೆಳಗಿದವರು ಶ್ರೀಮತಿ ಬಸವಮ್ಮನವರು. ಮನೆತನದ ಆರ್ಥಿಕ ಹಾಗೂ ಸಾಂಸಾರಿಕ ಸಂಕಟಗಳನ್ನೆಲ್ಲ ಧೀರಪುರುಷರಾಗಿ ಎದುರಿಸಬೇಕಾದಾಗಲೆಲ್ಲ ಇನಿಯಳ ಸಲಹೆ ಸಿಗುತ್ತಿತ್ತು. ಅವರು ಜೀವನದ ಧ್ಯೇಯಸಿದ್ಧಿಗೆ ಪ್ರತಿಜ್ಞಾಬದ್ಧರಾದುದೇನೋ ನಿಜ. ಆದರೆ ಪ್ರತಿಜ್ಞೆಯನ್ನು ಮರೆಮಾಡುವಂತೆ ಮಂಕುಬಂದು ಮುಸುಕಿದರೆ ಮಡದಿಯಿಂದಲೇ

ಆ ಮಂಕು ಮಾಯವಾಗುತ್ತಿತ್ತು. ಹಳ್ಳಿಗಾಡಿನಲ್ಲಿ ಅಗ್ನಿಕುಂಡದ ಮೇಲೆ ನಿಂತಿದ್ದ ಅವರ ಜೀವನಕ್ಕೆ ಸತಿಯಿಂದ ಶೀತಲ ಪಂಕವ ಲೇಪನವಾಗುತ್ತಿದ್ದುದರಿಂದ ಆ ಅಗ್ನಿದಿವ್ಯದಲ್ಲಿಯೂ ಅವರು ತಮ್ಮ ವ್ಯಕ್ತಿತ್ವವನ್ನು ಕಾಯ್ದುಕೊಂಡು ಅದನ್ನು ಕೊಸರಿಸಿ ಕೊಂಡು ಅಷ್ಟೇ ಅಲ್ಲ ಅದನ್ನು ಭವ್ಯವಾಗಿಸಿದರೆಂದು ಹೇಳಿದ ಕವಿವರ್ಯ ಶ್ರೀ ಗೋಕಾಕರವರ ಮಾತಿನಲ್ಲಿ ಸತ್ಯವಿದೆ.

## ೪. ಗ್ರಾಮಸುಧಾರಕ

ಆದರ್ಶ ಗೃಹಸ್ಥಾಶ್ರಮಿಗಳಾದಂತೆ ಅವರು ಶ್ರೇಷ್ಠ ಗ್ರಾಮಸುಧಾರಕರೂ ಹೌದು. ಕಳೆದ ಸುಮಾರು ವರ್ಷಗಳಿಂದ 'ಮಧುರಚೆನ್ನರು' ಕನ್ನಡ ನಾಡಿನಲ್ಲಿ, ಕಂಡೂ ಕಾಣದಂತೆ, ಮಧುರವಾದ, ವಾತಾವರಣವನ್ನು ಹುಟ್ಟಿಸಿದರು. ಅವರ ಯೋಗದಿಂದ ಹಲಸಂಗಿ ಸಾಧನಭೂಮಿಯಾಗಿ ಪರಿಣಮಿಸಿ ಹೆಸರುಗಳಿಸಿತು. ಕುಗ್ರಾಮವಾದ ಹಲಸಂಗಿಯಲ್ಲಿ ನಿಂತು ಕೊಂಡು ಹಲವು ಸಂಗಿಗಳನ್ನು ಆದರದಿಂದ ಬರಮಾಡಿ ಕೊಂಡರು. ಮಧುರಚೆನ್ನರು ಹಲಸಂಗಿಯನ್ನು ಬಿಟ್ಟುಬರುತ್ತಿದ್ದುದು ವಿರಳವಾದರೂ ಕರ್ನಾಟಕದ ಹಾಗೂ ಹೊರಗಿನ ಉನ್ನತ ಜೀವಿಗಳೊಂದಿಗೆ ಅವರು ಘನಿಷ್ಟ ಸಂಬಂಧವನ್ನಿಟ್ಟು ಕೊಂಡಿದ್ದರು. ಚೆನ್ನಮಲ್ಲಪ್ಪನವರೊಂದಿಗೆ ಒಮ್ಮೆ ಆದ ಪರಿಚಯ ಚಿರಸ್ನೇಹದಲ್ಲಿ ಪರಿಣಮಿಸುತ್ತಿತ್ತು. ಆ ಗಲಗಲಿಯವರು ಒಮ್ಮೆ ಮಾಡಿದ ಗೆಳೆತನ ಕೆಟ್ಟಿತೆಂಬ ಮಾತು ಕೊನೆಯವರೆಗೂ ಕೇಳಿಬರಲಿಲ್ಲ. ಹೋಗಿಬಂದ ಯಾರನ್ನಾದರೂ ಕೇಳಿವರೆ ಇದೊಂದು ಅವರ ಜೀವನದ ಅಗ್ಗಳಿಕೆ ಎಂದು ಹೇಳುತ್ತಾರೆ.

'ಹಳ್ಳಿಗಳಿಗೆ ಹಿಂದಿರುಗಿರಿ' ಎಂಬ ಆಂದೋಲನವನ್ನು ಹೂಡಿದ ಗಾಂಧೀಜಿಯವರ ಮಾತು ಚೆನ್ನಮಲ್ಲಪ್ಪನವರ ಮನಸ್ಸಿನಮೇಲೆ ಪರಿಣಾಮವನ್ನುಂಟು ಮಾಡಿರಲಿಕ್ಕೆ ಸಾಕು. ಬಾಪೂಜಿಯವರು ಸಮೀಪವಿರುವ 'ಸೇಗಾಂವ' ಎಂಬ ಸಾಧಾರಣ ಮಟ್ಟದ ಹಳ್ಳಿಯೊಂದನ್ನು ಎಲ್ಲ ವಿಧದಿಂದ ಸುಧಾರಿಸಿ 'ಸೇವಾಗ್ರಾಮ' ವೆಂದು ಕರೆಯಲು ತಕ್ಕದನ್ನಾಗಿ ಮಾಡಿದರು. ಪಲಸಂಗಿಯನ್ನೂ ಆ ಸ್ಥಿತಿಗೆ ತಂದು ಮಾರ್ಪಡಿಸಬೇಕೆಂಬುದು ಮಧುರಚೆನ್ನರ ಆಶೆಯಾಗಿದ್ದಿರಬೇಕು. 'ಹಳ್ಳಿಗಳಿಗೆ ಹಿಂದಿರುಗಿರಿ' ಎಂಬ ಗಾಂಧೀ ಚಳುವಳಿಯನ್ನು ಅವರು ಪುರಸ್ಕರಿಸಿದರು. ತಮ್ಮ 'ಕಾಳರಾತ್ರಿ,' ಯಲ್ಲಿ ಅವರು ಇಂದಿನ ಹಳ್ಳಿಗಳ ದುಃಸ್ಥಿತಿಯನ್ನು ಅದರಲ್ಲೂ ಒಕ್ಕಲಿಗನ ಮನೆಯ ಅವ್ಯವಸ್ಥತೆಯನ್ನು ಪಿಕದೀಕರಿಸಿದ್ದಾರೆ. ಸರ್ವಸಾಮಾನ್ಯ ಭಾರತೀಯ ಒಕ್ಕಲುಮಗನ ಸ್ಥಿತಿಯಂತೆಯೇ ಇನ್ನಿತರ ನೇಗಿಲಯೋಗಿಗಳ ಸ್ಥಿತಿ–ಯಿರುವದು ಸಹಜ. ಜನಸಾಮಾನ್ಯರಿಗೂ ಆಧ್ಯಾತ್ಮಿಕ ಜೀವನದಲ್ಲಿ ಅಭಿರುಚಿ ಹುಟ್ಟುವಂತೆ ತಮ್ಮ ವೈಯಕ್ತಿಕ ಸತ್ಯಬಾಳು, ಬರೆಹಗಳಿಂದ ಪ್ರಯತ್ನಿಸುತ್ತಿದ್ದ ಮಧುರಚೆನ್ನರು ಕಾಳರಾತ್ರಿಯಲ್ಲಿ ಹಳ್ಳಿಯ ಅವಹೇಳನಕರ ಬಾಳಿನ ಸತ್ಯ ಸಂಗತಿಯನ್ನು ಅಲ್ಲಲ್ಲಿ ಚಿತ್ತರಿಸಿದ್ದಾರೆ. ಆಧ್ಯಾತ್ಮದ ಹಸಿವಿದ್ದವನಿಗೂ ಕಾಳರಾತ್ರಿ ಬಂದು ಮುತ್ತುವಂತೆ ನಮ್ಮ ನಾಡಿನ ಕುಗ್ರಾಮಗಳಿಗೂ ಕಾಳರಾತ್ರಿ ಕವಿದು. ಒಕ್ಕಲಿಗನ ಮನೆಯನ್ನು ಮುತ್ತಿದೆ ಎಂಬ ಮಾತಿನ ವಿವರಣೆ ಕೆಳಗಿನಂತಿದೆ:

"ಒಕ್ಕಲಿಗರ ಮನೆಗಳಿರುವದು ಹೇಗೆಂಬುದನ್ನು ಬೇರೆ ಬಣ್ಣಿಸಬೇಕಾಗಿಲ್ಲ. ಒಟ್ಟಾರೆ ಅವರಿಗೆ ಹೇಗಾದರೂ ಜಿಂದಿಗೆ

ಯನ್ನೆಲ್ಲ ಸುರಕ್ಷಿತವಾಗಿ ಇಟ್ಟುಕೊಳ್ಳುವದಕ್ಕೆ ಎಂಥದೇ ಆದರೂ ಸರಿ.

"ಒಂದು ಬಾಗಿಲುಳ್ಳ ಮನೆಯಾದರೆ ಸಾಕು. ಅಂಗಳ ತುಂಬೆಲ್ಲ ದನಗಳು. ಅಂಗಳಲ್ಲಿ ಅಲ್ಲಲ್ಲಿ ಸ್ವಲ್ಪ ಸ್ಥಳವಿದ್ದರೆ, ಅಲ್ಲಿ ಕಟ್ಟಿಗೆ ಮುಂತಾದ್ದು. ಅಲ್ಲದೆ ಅಲ್ಲೇ ಬಚ್ಚಲವೋರೆ. ಇನ್ನು ಪಡಸಾಲೆಯಲ್ಲಿ ಒಂದು ಕಡೆಗೆ ಹತ್ತೆಂಟು ಕಣಿಕೆಯ ಹೊರೆಗಳು ಅಲ್ಲದೆ ಹೈನದ ಎಮ್ಮೆ ಆಕಳುಗಳ ಎಳೆಗರುಗಳೊಂದೆರಡು, ಅವೂ ಪಡಸಾಲಿಯಲ್ಲಿಯೇ, ಇನ್ನು ಒಂದರ್ಧ ಕೋಣೆಯಿದ್ದರೆ ಒಂದರಲ್ಲಿ ಹಗ್ಗ ಕಣ್ಣೆ, ಕುಡ-ಬಳೆ, ವಾರು-ಗೀರು ಮುಂತಾದ ಸಾಮಾನುಗಳು. ಇನ್ನಿರುವುದೊಂದು ದೇವರ ಕೋಣೆ. ಅದರಲ್ಲಿ ಗಿರ್ಧ ಭಾಗ ಜಗುಲಿ, ಇನ್ನೊಂದು ಗಿರ್ಧ ಭಾಗದಲ್ಲಿ ಗಡಿಗೆಗಳ ಅದಕಿಲು, ಉಳಿದರ್ಧದಲ್ಲಿ ಅಡಿಗೆಯ ದಿನಸಾಧನೆಯ ಜೀನಸುಗಳು. ಪಡಸಾಲೆಯಲ್ಲಿಯೇ ಒಂದು ಮಗ್ಗಲಿಗೆ ಅಡಿಗೆ ಮತ್ತು ಊಟ-ಉಡಿಗೆ. ಇಂಥ ಉಗ್ರಾಣದಲ್ಲಿ ಮನೆಯೊಳಗಿನ ಜನರು ಆ ಸಾಮಾನು ಸಡಿಗಳ ಸಂತೆಯಲ್ಲಿ. ಅವರೂ ಒಂದು ವಿಧದ ಸಾಮಾನು ಸಡಿಗಳೇ ಆಗಿ ಯಾವ ಸಂದಿಗೊಂದಿಯಲ್ಲಾದರೂ ಬಿದ್ದುಕೊಂಡಿರಬೇಕು. ಇದು ಹೊಲಸು ಹೇಸಿಕೆಗಳಿಗಂತೂ ಉಗಮಸ್ಥಾನ. ಇರುಳಲ್ಲಿ ತಗಣಿ ಸೊಳ್ಳೆಗಳದಂತೂ ನಿರಂಕುಶ ರಾಜ್ಯ. ಹಾಸು ಹೊದೆಯುವ ಕೌದಿ ಕೂರಿಗಳ ವೈಭವವು ವರ್ಣನಾತೀತ. ಬಡವರ ಕಷ್ಟಕ್ಕಿಂತ ಇಂಥ ಜೊಳ್ಳು ಮನೆಮಾರಿನವರ ಕಂಗಾಲಸ್ಥಿತಿಯೇ ನನಗೆ ಬಹಳ ಶೋಚನೀಯವಾಗಿ ಕಾಣಿಸುತ್ತದೆ."

ಕನ್ನಡನಾಡಿನಲ್ಲಿ ಆಧ್ಯಾತ್ಮದ ಚಿಗುರೊಡೆಸಿ ಕುಕಿಲು ಕೇಳಿಸಿದ 'ಮಧುರಚೆನ್ನ' ಅವರು ನಾಡಿನ ಒಕ್ಕಲು ಮಕ್ಕಳ ಕನಿಕರ ಸ್ಥಿತಿ ಕಂಡು ನಾಡಿ ಮಿಡಿದವರಾಗಿ 'ಹಳ್ಳಿಗಳಿಗೆ ಹಿಂದಿರುಗಿರಿ' ಎಂದ ಮಹಾತ್ಮಗಾಂಧೀಜಿಯಿಂದಾರಂಭಿತ ಆಂದೋಲನಕ್ಕೆ ಕನ್ನಡ ನಾಡಿನಲ್ಲಿ ನಾಂದಿಯಾಗಿ ಕಾರ್ಯ ಕೈಕೊಂಡವರು. ಇದು ಅವರಿಗೆ ಬೇಕಾಗಿದ್ದರೆ ಬಾಗಲಕೋಟೆಯಲ್ಲಿಯೋ, ಬಿಜಾಪುರದಲ್ಲಿಯೋ ಇದ್ದುಕೊಂಡು ಬಾಳಬಹುದಾಗಿದ್ದಿತು. ಚೆನ್ನಮಲ್ಲಪ್ಪನವರು ವೈಯಕ್ತಿಕ ಜೀವನೋದ್ಧಾರದೊಡನೆ ಸಾಂಘಿಕ ಜೀವನದಲ್ಲಿಯೂ ಪ್ರಗತಿಯುಂಟಾಗಲೆಂದು ತಿಳಿದೇ ಹಳ್ಳಿಗಾಡನ್ನು ಸೇರಿದ್ದರು. ಹಲಸಂಗಿಯಷ್ಟನ್ನೇ ಅಲ್ಲದೇ ಅವರ ಸುತ್ತಮುತ್ತಲಿನ ಹಳ್ಳಿಯ ಜೀವನದಲ್ಲಿ ತಮ್ಮ ವ್ಯಕ್ತಿತ್ವ ಪ್ರಭಾವದಿಂದ ನವೀನ ಚೈತನ್ಯವನ್ನು ತುಂಬಿದ್ದರು. ಹಳ್ಳಿಗಳಲ್ಲಿ ವಾಚನಾಲಯಗಳನ್ನು ತೆರೆಯಿಸಿ. ಪತ್ರಿಕೆಗಳನ್ನು ನಡೆಸಿ, ಪುಸ್ತಕಮಾಲೆಗಳನ್ನು ಹೊರಡಿಸಿ, ಇತಿಹಾಸ ಸಂಶೋಧನೆ ಮಾಡಿದರು.

"ಅತ್ತಿಗಿ ಮನಿಯಾಗ ಮುತ್ತಾಗಿ ಇರಬೇಕು,
ಹೊತ್ತ ನೀಡಿದರ ಉಣಬೇಕ ನನ ಮಗಳ
ಉತ್ತಮರ ಹೆಸರ ತರಬೇಕ

ಅಂಜೂರಿ ಹಣ್ಣೆಂದು ತಂದು ತೋರಲಿ ಬ್ಯಾಡ
ಹೆಂಡರಿಗೆ ಸಲಗಿ ಕೊಡಬ್ಯಾಡ ನನ ತಮ್ಮ
ಮುಂದೆ ನಿನಮಾತು ನಡಿಯುವ"

ಇಂತಹ ಅಮೂಲ್ಯ ಪದ್ಯಗಳನ್ನು ಸಂಗ್ರಹಿಸುತ್ತ ಜಾನಪದ ಸಾಹಿತ್ಯದ ಪ್ರಕಟನೆಯ ಹರಿಕಾರರಾದರಲ್ಲದೆ ಈ ಸಾಹಿತ್ಯ

ವನ್ನು ಬೆಳಕಿಗೆ ತರುವಲ್ಲಿ ಬಗೆಬಗೆಯಿಂದ ದುಡಿದರು. ಶ್ರೀ ಅರವಿಂದ ಮಂಡಳವನ್ನು ಸ್ಥಾಪಿಸಿ ಹಳ್ಳಿಯ ಜನತೆಯಲ್ಲಿ ತಿಳಿವಿನ ಪ್ರಚಾರವನ್ನು ಸದ್ದಿಲ್ಲದೆ ಮಾಡಿದರು. ಆದರ್ಶ ಪತ್ರಿಕೋದ್ಯಮಿಗೆ, ಆದರ್ಶ ಬರಹಗಾರನಿಗೆ ಸದ್ಯ ತುಂಬ ಸಂಭಾವನೆ ಸಹಕಾರ ಸಿಗುವದು ದುರ್ಲಭ. 'ಕನ್ನಡದಲ್ಲಿ ಕವಿಯಾಗಿ ಜನಿಸಬೇಡ'ವೆಂಬುದು ಹಿರಿಯರೊಬ್ಬರ ಅನುಭವದ ಮಾತು. ಇದರಲ್ಲಿ ನಿರಾಶೆ ಮೂಡಿದ್ದರೂ ಸತ್ಯವಿದೆಯೆಂಬುದನ್ನು ಅಲ್ಲಗಳೆಯುವಂತೆಯೂ ಇಲ್ಲ. ಹೀಗಿರುವಾಗ ಆಧ್ಯಾತ್ಮಿಕ ಸತ್ಯ ಸಾಹಿತ್ಯವನ್ನು ಎಷ್ಟು ಜನ ಬಯಸಬಹುದು ? ಏನಿದ್ದರೂ ಮಧುರಚೆನ್ನರು ಧೈರ್ಯ ಸಾಹಸದಿಂದ ಆಧ್ಯಾತ್ಮಪೂರ್ಣವಾದ 'ಅರವಿಂದ ಗ್ರಂಥಮಾಲೆ' ಎಂಬುದೊಂದನ್ನು ಪ್ರಾರಂಭಿಸಿದರು. ಇವರ ಈ ಸಾಹಸ ಮೆಚ್ಚುವಂತಹದು. ಆಧುನಿಕ ಕಾಲದ ಆಧ್ಯಾತ್ಮ ಸಮಸ್ಯೆಯನ್ನು ನಮ್ಮ ನಾಡಿನ ಓದುಗರು ಅರಿಯಬೇಕೆಂಬುದೇ ಅವರ ಗ್ರಂಥಮಾಲೆಯ ಉದ್ದೇಶವಾಗಿದ್ದಂತೆ ತೋರುತ್ತದೆ. ಅಂಥ ಪುಸ್ತಕಗಳನ್ನೇ ಹೆಚ್ಚಾಗಿ ಪ್ರಕಟಿಸುತ್ತ ಬಂದಿರುವದೇ ಇದಕ್ಕೆ ಸಬಲ ಕಾರಣ. 'ಬಾಳಿನಲ್ಲಿ ಬೆಳಕು', 'ಭಾರತೀಯ ನವಜನ್ಮ', 'ಬೆಳಗು,' 'ನಂದನವನ', 'ಕನ್ನಡಿಗರ ಕುಲಗುರು',ಇಂತಹ ಆಧ್ಯಾತ್ಮಿಕ ತಾತ್ವಿಕ ಗ್ರಂಥ ಪ್ರಕಟನೆಯಲ್ಲಿ ಅರವಿಂದ ಗ್ರಂಥಮಾಲೆಯವರದೊಂದು ಅವ್ಯಕ್ತ ಉದ್ದೇಶವಿರುವದೆಂಬುದು ' ಸತ್ಯ. ಮಧುರಚೆನ್ನರ ದೃಷ್ಟಿಯೇ ಇದಕ್ಕೆ ಸೃಷ್ಟಿ.

ಉತ್ತರಯೋಗಿ ಶ್ರೀಅರವಿಂದರ 'ಪೂರ್ಣಯೋಗ' ಗ್ರಂಥದ ಪ್ರಥಮ ಪಾದವನ್ನು ಕನ್ನಡಕ್ಕೆ ಪರಿವರ್ತಿಸಿದ್ದು

ಮಧುರಚೆನ್ನರ ಮೇಲ್ಕಾಣಿಸಿದ ಪುಸ್ತಕಗಳೆಲ್ಲವುಗಳಲ್ಲಿ ಕಳಸ ಪ್ರಾಯವಾಗಿದೆ. ಸಾಹಿತ್ಯದ ಜೊತೆಗೆ ಅಧ್ಯಾತ್ಮ ವಿದ್ಯೆಯನ್ನು ಅಭ್ಯಸಿಸಿ, ಕಾವ್ಯಾನಂದ-ಬ್ರಹ್ಮಾನಂದಗಳ ಸಮರಸ ಜೀವನ ನಡೆಸಿದ ಅನುಪಮ ಕವಿಗಳಿವರು ಜಾನಪದ ಕವಿಗಳನ್ನೂ ಆಶು ಕವಿಗಳನ್ನೂ ಒಗ್ಗೂಡಿಸಿ ಕಟ್ಟಿಕೊಂಡಿದ್ದ ಹಲಸಂಗಿಯ ಕಾವ್ಯಾನುಭವ ಮಂಟಪಕ್ಕೆ ಮಧುರಚೆನ್ನರು ಆದರ್ಶಮೂರ್ತಿ ಯಾಗಿದ್ದರು.

ಈ ಮೂರ್ತಿಗೆ ಮೊದಲು ಇಟ್ಟಹೆಸರು ಚೆನ್ನಮಲ್ಲಪ್ಪ ಎಂಬುದಾಗಿದ್ದರೆ, ಜನತೆ ಕೊಟ್ಟ ಹೆಸರು 'ಶರಣ' ಎಂದು ದಾಗಿದೆ. ಆದರೆ ತಾವೇ ನಿಷ್ಠೆಯಿಂದ ಇಟ್ಟುಕೊಂಡ ಹೆಸರು "ಮಧುರಚೆನ್ನ" ಎಂಬುದು. 'ಮಧುರಚೆನ್ನ' ಎಂದೇಕೆ ಕರೆದು ಕೊಂಡಿರಬೇಕು ? ಇವರಲ್ಲಿ ವಿಶಿಷ್ಟತೆ ಇದ್ದಿರಲೇಬೇಕಲ್ಲಾ! ಅವರಲ್ಲಿದ್ದ ಅಸಾಧಾರಣ ಪ್ರೇಮವೇ ಇದಕ್ಕೆ ಕಾರಣ. ಇವರ ಲ್ಲಿದ್ದ ಸಹಜವಾದ ಪ್ರೇಮಕ್ಕೆ ಬಲ್ಲಿದ-ಬಡವ, ಸುಶಿಕ್ಷಿತ-ಅಶಿಕ್ಷಿತ, ಹಿರಿಯ-ಕಿರಿಯ ಎಂಬ ದ್ವಂದ್ವಗಳು ಎಂದೂ ಎದುರು ಬರ ಲಿಲ್ಲ. ಬಂದವರೆಲ್ಲರಿಗೂ "ಬನ್ನಿರಿ ಹಮಳವಿದ್ದಿರಾ .. ಶರಣಾ ...ಶರಣು" ಎಂದೆಂಬ ಸದಾಪಕಾಲ ಒಂದೇ ಸ್ಥಿತಿಯಲ್ಲಿದ್ದ ಮಂಜುಳ ಧ್ವನಿಯ ಮೆಲುಮಾತುಗಳನಾಡಿ ಹತ್ತಿರ ಕರೆದು ಕೊಳ್ಳುತ್ತಿದ್ದರು. ಅಂತೆಯೇ ಜನತೆ ಹಲಸಂಗಿಯವರೆಗೆ ಹೋಗಿ ಬರುತ್ತಿದ್ದಿತು. ಹೋಗಿ ಬಂದವರೆಲ್ಲ ಹಲಸಂಗಿಯು ಕನ್ನಡನಾಡಿನ ಪಾಂಡಿಚೇರಿಯಾಗಿದೆ ಎಂದು ಹೇಳುತ್ತಿದ್ದರು. ತರುಣ ಬರೆಹಗಾರರೊಬ್ಬರು ತಮ್ಮ ಭಾಗ್ಯಶ್ರೀಗೆ ಬರೆದ ಪತ್ರ ಲೇಖನದಲ್ಲಿ "...ಭಾಗ್ಯಶ್ರೀ ನಮಗಂತೂ ಪಾಂಡಿಚೇರಿಗೆ

ಹೋಗಲಾಗಲಿಲ್ಲ. ಬಹುಶಃ ಮುಂದೆಯೂ ಹೋಗಲಿಕ್ಕಾಗ ಲಿಕ್ಕಿಲ್ಲ ಆದ್ದರಿಂದ ನಮ್ಮ ಪಾಲಿನ ಪಾಂಡಿಚೇರಿಯಾಗಿರುವ ಹಲಸಂಗಿಗೆ ಒಮ್ಮೆ ಬಂದರಾಯಿತು " ಹೀಗೆಂದು ಹಲಸಂಗಿಯ ಬಗೆಗೆ ಬರೆದಿರುವ ಮಾತು ಅಕ್ಷರಶಃ ಸತ್ಯ. ಜಗನ್ಮಾತೆಯುಮರಿತ್ತ ಶ್ರೀಅರವಿಂದ ಮಕರಂದ ಸವಿದ ಆ ತುಂಬಿಯು ಹಲಸಂಗಿಯ ಕಾಡಿನಲ್ಲಿ ಜೇನುಕಟ್ಟಿತು.

ಉದ್ಯೋಗ ಮಾತ್ರದಿಂದ ಕೀಳು ಕುಲದವರೆಂದು ಜನತೆ ಕರೆದರೆ ಮಧುರಚೆನ್ನರು ಹೃದಯ ಪರೀಕ್ಷಿಸಿ ಮಾದಣ್ಣನಿಗೆ ಅತಿ ಹತ್ತಿರದ ಸ್ನೇಹಿತನ ಪಟ್ಟಕಟ್ಟಿದ್ದರು. ಉಪಕಾರ ಸ್ಮರಿ ಸುವ ಉದಾತ್ತ ಮತಿಯುಳ್ಳ ಚೆನ್ನಮಲ್ಲಪ್ಪನವರು ತಮ್ಮ ಆತ್ಮಚರಿತ್ರೆಯನ್ನು ಹೇಳಿದ ಮುಪ್ಪುರಿಗೂಡಿದ ಆ ಮೂರು ಪುಸ್ತಕಗಳಲ್ಲಿ ಮಂಜುಳನ ಪಾತ್ರವನ್ನೂ ರೂಪಿಸಿದ್ದಾರೆ. ಹೆಜ್ಜೆ ಹೆಜ್ಜೆಗೂ ಸಹಾಯಹಸ್ತ ನೀಡಿದ ಮಂಜುಳನನ್ನು ಭಾವ ಚಿಂತಾರತ್ನವೆಂದು ಕರೆದಿದ್ದಾರೆ. ಆ "ಪೂರ್ವರಂಗ", "ಕಾಳ ರಾತ್ರಿ", "ಬೆಳಗು' ಗಳಲ್ಲಿ ಬಂದ ಮಂಜುಳನೇ ಆ ಮಾದಣ್ಣ. ಈ ಮಾತು ಅವರ ಮಧುರ ಗೀತೆಯನ್ನು ಓದುವದರಿಂದ ಇನ್ನೂ ಸ್ಪಷ್ಟವಾಗುತ್ತಿದೆ.

"ಬಹುದಿನದ ಬಯಕೆಯೊಂದಿತ್ತೆನ್ನ ತಮ್ಮಯ್ಯ
ನಿನ್ನ ಮೇಲೊಂದು ಹಾಡೇನೆಂಬುವಾ॥
ಹಲವು ದಿನದಿಂದಲೂ ಪ್ರತಿಭೆ ಮಲಗಿದ್ದವಳು
ಇಂದಿದೇ ಎದ್ದಿಹಳು ಬಾ ನೋಡುವಾ॥
ನಿನ್ನ ನೆವದಿಂದೆನ್ನ ಗೆಳೆತನದ ಕುಲಕೋಟಿ
ಗೆಲ್ಲ ನನ್ನೊಲವಿನಾ ಸಿರಿಯ ಪೇಳ್ವೆ"॥

ಹೀಗೆ ಪ್ರಾರಂಭವಾಗುವ ಮಧುರಗೀತೆಯು ಕಾವ್ಯದುದ್ದಕ್ಕೂ
ಗೆಳೆತನದ ಮಾಧುರ್ಯವನ್ನು ತುಂಬಿದ್ದಾರೆ.

ಉಪ್ಪು-ನೆಲ್ಲಿ ಕೂಡಿದಾಗ ಎಲ್ಲಿಲ್ಲದ ರುಚಿಯುಂಟಾಗು
ವಂತೆ ಚೆನ್ನಮಲ್ಲ ಮಾದಣ್ಣ ಕೂಡಿ ಆಡಿ ಯಾರಲ್ಲಿಲ್ಲದ ಸ್ನೇಹ
ವನ್ನು ಸಂಪಾದಿಸಿ ಸುಖಜೀವಿಗಳಾಗಿದ್ದರು. ಅವರೀರ್ವರಲ್ಲಿಯ
ಪ್ರೇಮ ಶ್ರೀಕೃಷ್ಣ-ಸುಧಾಮರಲ್ಲಿದ್ದ ಆದರ್ಶ ಸ್ನೇಹವಾಗಿ
ದ್ದಿತು. ಅರಗಳಿಗೆ ಬಿಟ್ಟಿರಬೇಕಾದರೆ ಅವರಿಗೆ ಪ್ರಾಣ ಸಂಕಟ
ವಾಗುದ್ದಿತೆಂಬುವನ್ನು ಮಧುರಚೆನ್ನರ ಮಾತಿನಲ್ಲಿಯೇ ಕೇಳಿ
ನೋಡಿ—"ಅರಗಳಿಗೆ ಅಗಲಲಿಲ್ಲ, ಅಗಲಿದ್ದು ಗೊತ್ತಿಲ್ಲ. ಅಗಲಿ
ದರೆ ಕಣ್ಣು, ಕಿವಿ, ಮನಸು, ಅತ್ತೇ" ಇದ್ದವೆಂದು ಹೇಳುತ್ತ,
"ನಿನ್ನ ನುಡಿಯೂ ಮಧುರ, ನಿನ್ನ ನಡೆಯೂ ಮಧುರ, ನಿನ್ನ
ಸೆಡವೂ ಮಧುರ. ಸರ್ವ ಮಧುರ, ನಿನ್ನ ಮುನಿಸೂ ಮಧುರ.
ನಿನ್ನ ಕನಸೂ ಮಧುರ. ನಿನ್ನದೆಲ್ಲಾ ನನಗೆ ಮಧುರ ಮಧುರ"
ಎಂದು ಹೃದಯ ತುಂಬಿ ಹಾಡಬೇಕಾದರೆ ಮಾದಣ್ಣನಲ್ಲಿ ಭಾವ
ಭಕ್ತಿಯು ಕಂಡು ದಿವ್ಯ ಪ್ರೀತಿಯನ್ನು ಉಂಡಿರಬೇಕು. "ಜನ
ರಾಡಿಕೊಳ್ಳಬಹುದು ನನಗೂ ನಿನಗೂ ಕೂಡಿ. ಅವರೇನು
ಬಲ್ಲರೋ ಒಳನಿಧಾನ" ಎನ್ನುತ್ತ ಯಾವದೇನೇ ಇರಲಿ ಪ್ರೀತಿ
ಯಂಥಾ ವಸ್ತು ಭವದಲ್ಲಿ ಬೇರೊಂದಿಲ್ಲವೆಂದುದು ಮಧುರ
ಚೆನ್ನರು ಮನಗಂಡಮಾತು.

ಪ್ರೇಮವೆಂಬ ಮಹತ್ತರವಾದ ಶಬ್ದದ ಹಣೆಬರೆಹವು
ಹಾಳಾಗಿ ಇಂದು ಕೀಳು ಬಳಿಕೆಗಿಳಿದುಬಿಟ್ಟದ್ದನ್ನು ಕಂಡು ಮನ
ನೊಂದುಕೊಂಡೋ ಏನೋ ಮಧುರಚೆನ್ನರು ಆ ಶಬ್ದದ
ಘನತೆಯನ್ನರಿತು ಕಾವ್ಯದಲ್ಲಿ ಬಳಸಿಕೊಂಡಿದ್ದಾರೆ. ರಾಗ,

ಅನುರಾಗ, ಆಶೆ, ವಾಸನೆ ಸ್ವಾಮಿ-ಗುರು-ಮಾತಾ-ಪಿತೃ-ದೇವತಾ ಭಕ್ತಿ, ರತಿ, ಇಚ್ಛೆ ಇತ್ಯಾದಿಗಳನ್ನು ಆ ಘನ ಮಹಿಮೆಯು ಪ್ರೇಮ ಶಬ್ದದ ಪ್ರತಿರೂಪಗಳೆಂಬುದನ್ನು ಸ್ಪಷ್ಟಪಡಿಸಿದ್ದಾರೆ. ಆದರಕ್ಕೆ ಅನಾದರವುಂಟು, ಮೋಹಕ್ಕೆ ಪ್ರತಿಯಾಗಿ ವೈರವುಂಟು. ಆದರೆ ಪ್ರೇಮಕ್ಕೆ ಪ್ರತಿಯಿಲ್ಲ ಎಂಬುದನ್ನು ಕೆಳಗಿನ ಪದ್ಯದಲ್ಲಿ ಸ್ಪಷ್ಟಪಡಿಸಿದ್ದಾರೆ.

"ಪ್ರೇಮತಾನಾತ್ಮದ್ದು ಮೋಹವದು ಜೀವದ್ದು
ಆದರವು ಬುದ್ಧಿ ವೈಭವದ ಗಂಟು
ಪ್ರೀತಿಯದು ಅರಿತು ಮಾಡಿದ ಮೋಹ, ಮೋಹವದು
ಅರುವಿಲ್ಲದೊಂದೊಲವು ಬೇರೆಯೇನು ?
ರೀತಿಯಲಿ ಪರಿಯುಂಟು ಪ್ರೀತಿ ಮೋಹಗಳಲ್ಲಿ
ಬೆಳಕು ಕತ್ತಲೆಯುಷ್ಟು ಮತ್ತೆಯೇನು ?..."

ಅತ್ತು ಕರೆದು ಬೈದು ಅಂದು ದೇವರಾಯನ ಸುಳಿವನ್ನು ಕಾಣದಾಗ್ಗೆ ಪ್ರೀತಿಯಂಥ ವಸ್ತು ಭವದಲ್ಲಿ ಬೇರೊಂದಿಲ್ಲವೆಂದರಿತು ಸಕಲಜೀವಿಗಳಿಗೆ ಲೇಸನ್ನು ಬಯಸುತ್ತ ಮಧುರ ಮಮತೆಯನ್ನು ವ್ಯಕ್ತಪಡಿಸಿ "ನನಗೆ ನೀನತಿ ಮಧುರ ನಿನಗೆ ನಾ ಬಲು ಚೆನ್ನ ಹೀಗೆಂತಲೇ ನಾವು ಮಧುರಚೆನ್ನ" ಎಂಬ ಮಾತನ್ನು ಅಂತರಾಳದಿಂದ ಹೊರಹೊಮ್ಮಿಸಿ 'ಮಧುರಚೆನ್ನ' ಎಂಬ ಅವರ ಕಾವ್ಯನಾಮದ ಮಹತಿಯನ್ನು ತೋರಿಸಿದ್ದಾರೆ. ಈ ರೀತಿ ಛಂದಸ್ಸಿದ್ಧಿ, ಭಾವಸ್ಪಂದನ ಹಾಗೂ ಸ್ವಾನುಭವದ ಅನನ್ಯತೆಗಳಿಂದ ಹೊರಹೊಮ್ಮಿದ ಈ ಕಾವ್ಯದಲ್ಲಿ ದಿವ್ಯತೆಯಿದೆ. ಅನುಭವದ ಪರಿಪಾಕವಾಗಿ ಬಂದಿರುವ ವ್ಯಕ್ತಿತ್ವದ ತತ್ವಸಾರವಿಲ್ಲಿದೆ. ಈ ನಾಲ್ಕು ಮಾತುಗಳು ಇವರ 'ನನ್ನನಲ್ಲ

ಕಾವ್ಯಕ್ಕೂ ಸಂಪೂರ್ಣವಾಗಿ ಅನ್ವಯಿಸಿವೆ ಎಂದು ಹಿರಿಯ ಕವಿ ವಿನಾಯಕರು ಹೇಳಿದ್ದಾರೆ. ಉತ್ತರ-ದಕ್ಷಿಣ ಧ್ರುವಗಳಂತಿರುವ 'ಮಧುರಗೀತೆ', 'ನನ್ನ ನಲ್ಲ', ಕನ್ನಡ ಕಾವ್ಯದ್ವಯ ಮಧುರ ಚೆನ್ನರ ವ್ಯಕ್ತಿತ್ವದ ಪಡಿನೆಳಲಾಗಿ ಪ್ರತಿಭೆಯನ್ನು ಎತ್ತಿತೋರಿಸಿವೆ. ಈ ವ್ಯಕ್ತಿಯು ಶಕ್ತಿಯಾಗಲಿಕ್ಕೆ ಯೋಗಾಭ್ಯಾಸವು ಕಾರಣವಾಯಿತು. "ನಿದ್ದೆಯಾಚೆಗೆ ತೂರ್ಯವೆಂಬುದೊಂದುಂಟಂತೆ, ಯೋಗದಿಂದಾ ಸ್ಥಾನ ಸಾಧ್ಯವಂತೆ" ಎಂದು ಹೇಳುವುದಲ್ಲದೆ ಆ ರೀತಿ ಆಚರಿಸಿ ಇತರರಿಗೆ ಮಾರ್ಗದರ್ಶಿಗಳಾದರು.

## ೫. ಯೋಗಸಾಧಕ

ಇಚ್ಛಾಶಕ್ತಿ ಸುಪ್ತವಾಗಿ ಎಲ್ಲರಲ್ಲಿಯೂ ಇದ್ದೇ ಇದೆಯಾದರೂ ಸಾಧನೆಯಿಂದ ಅದನ್ನು ಅರಳಿಸಿಕೊಂಡವರಲ್ಲಿ ಮಾತ್ರ ಕಾರ್ಯಕಾರಿಯಾಗುತ್ತದೆ. ಇದಕ್ಕೆ ವಿಶ್ವಾಸ, ದೃಢ ಸಂಕಲ್ಪ, ತಾಳ್ಮೆ, ನಿರಂತರ ಪರಿಶ್ರಮ, ಇಂದ್ರಿಯ ನಿಗ್ರಹ, ಆತ್ಮಸಂಯಮನ ಮೊದಲಾದ ಸದ್ಗುಣಗಳು ಅವಶ್ಯಕ. ಮಧುರಚೆನ್ನರಲ್ಲಿ ಇವು ಇದ್ದ ಕಾರಣ, ಅವರಿಗೆ ಯಾವುದೂ ಅಸಾಧ್ಯವಾಗಲಿಲ್ಲ. ಅವರ ಇಚ್ಛಾಶಕ್ತಿ ಪ್ರಬಲವಿದ್ದ ಕಾರಣ ಕ್ಷಯಸದೃಶ ವ್ಯಾಧಿಯೊಡನೆ ಹೋರಾಡುತ್ತ ತೋಪಿನೊಳಗೆ ಸೇರಿ ಆತ್ಮಸಂಯಮ ಸಂಪಾದಿಸಿಕೊಂಡು ಹೊರಬರುತ್ತ ದೃಢ ಕಾಯದ ಮಲ್ಲರಾಗುತ್ತಿದ್ದರು. ಆಧ್ಯಾತ್ಮ ರಂಗಕ್ಕೆ ಆಧ್ಯಾತ್ಮ ವೀರರಾಗಿಯೇ ತೋಪಿನಿಂದ ತೂರಿಬರುತ್ತಿದ್ದರು. ಯೋಗ ಸಾಮರ್ಥ್ಯವನ್ನು ಸಂಪಾದಿಸಿಕೊಂಡರು. ವಾಙ್ಮಯದಲ್ಲಿ

ಮನೋವೃತ್ತಿ ಮತ್ತು ವಿಚಾರ ಇವುಗಳ ಬಗೆಗೆ ಅಪರಂಪಾರವಾದ ಅನುಶೀಲನವು ಕಂಡುಬರುತ್ತಿರುವದೇನೋ ನಿಜ. ಆದರೆ ಪಡೆಗಟ್ಟಿದ ವಿಚಾರಗಳು ಮೆದುಳಿನಲ್ಲಿ ಜಗಿದಾಡುವಂತೆ ಯಾವನೊಬ್ಬನು ತನ್ನ ದೇಹದಲ್ಲಿ ಶಕ್ತಿಗಳು ಚೆಲ್ಲಾಟವಾಡುತ್ತಿರುವದನ್ನು ಅನುಭವಿಸಿದ ಬಗೆಗೆ ಬರೆದ ಲೇಖನಗಳು ಸಿಗುವದು ಅಪರೂಪ. ಮಹರ್ಷಿ ಅರವಿಂದರಂಥ ಪೂರ್ಣಯೋಗವರಿತ ಮಹರ್ಷಿಯನ್ನುಳಿದರೆ ಕನ್ನಡದಲ್ಲಿ ರತ್ನಾಕರವರ್ಣಿ.

“ಪೆಂಪಿನ ಧ್ಯಾನದೊಳಾತಪೋಧನನಿರೆ ಕಂಪಿಸಿತೊಡನೆ ಮೂಲೋಕಾ ॥ ಮಿಡುಕಲಿಯದೆ ಮನವನು ತುಡೆದಾತ್ಮನೊಳಡಗಿಸಿ ನಿಷ್ಕಂಪನಾಗಿ । ಕಡುಗಲಿ ನಿಂದ ಹಂಸಧ್ಯಾನ ನಿಷ್ಠೆಗೆ । ನಡುಗದಿಹುದೆ ಮೂರು ಲೋಕಾ ॥ ತೀಡಿದ ಗಾಳಿಗೆ ಚಪ್ಪರ ಲತೆಗಳ! ಲ್ಲಾಡುವಂತಲುಗಿತು ಭೂಮಿ । ನಾಡು ಬೀಡಚ್ಚರಿವಟ್ಟುದೇನೆಂದು ಕೊಂ । ಡಾಡಲಾಧ್ಯಾನ ಶಕ್ತಿಯು !!” ಎಂದು ಭರತೇಶವೈಭವದಲ್ಲಿ ರತ್ನಾಕರ ಸಿದ್ಧನು ಹೇಳಿದ್ದುಂಟು. ಸೃಷ್ಟಿ ಅಲ್ಲಾಡಿದಂತೆ ತೋರಿದರೂ ಅಟ್ಟೆ ಅಲ್ಲಾಡಿದಂತೆಯೇ. ಜೈನರು ‘ಜಂಪಾಪತ’ವೆಂದರೆ ಶೈವರು ಈ ಸ್ಥಿತಿಗೆ ‘ಶಕ್ತಿಪಾತ’ವೆಂದು ಹೇಳಿದಂತಿದೆ. ಬಸವಣ್ಣನವರು ಪಶ್ಚಿಮ ಪದ್ಮಾಸನದಲ್ಲಿ ಕುಳಿತು, ತುಟಿ ಮಿಡುಕದೆ, ಎದೆ ಹಳಚದೆ ಬಿಟ್ಟ ಕಣ್ಣು, ಬಿಗಿದ ಹುಬ್ಬು, ಬ್ರಹ್ಮರಂಧ್ರದಲ್ಲಿ ಕಟ್ಟಿತು ಗುಡಿ, ನಟ್ಟೆಲವು ಮುರಿದು ಅಟ್ಟೆ ಅಲ್ಲಾಡಿತಲ್ಲ !! ಎಂದು ತಮ್ಮ ಧ್ಯಾನದ ಕಡುತರ ಅವಸ್ಥೆಯಲ್ಲಿ ಬೆನ್ನಲುವಿನಗುಂಟ ಶಕ್ತಿ ಪ್ರವಾಹವು ಹೊರಟು ದೇಹವನ್ನು ಅಲ್ಲಾಡಿಸಿಬಿಟ್ಟಿತೆಂದು ಹೇಳಿದ್ದಾರೆ.

ಗುಲಾಬಿ ಗಿಡದ ಉದ್ದೇಶ ಗುಲಾಬಿ ಹೂಗಳನ್ನು ಬಿಡುವದು ಹೇಗೋ ಹಾಗೆ ಮಾನವ ಬಾಳ್ವೆಯ ಉದ್ದೇಶ ಶಾಂತಿಯನ್ನು ಸ್ಥಾಪಿಸುವದಾಗಿರುವದೆಂದು ಮಧುರಚೆನ್ನರು ಅರಿತಿದ್ದರು. ಮಧುರಚೆನ್ನರೆಂಬ ತತ್ತ್ವಾಮೃತವೃಕ್ಷವು ಕೊನೆಗೆ ಬಿಟ್ಟ ಪೂರ್ಣ ಆಧ್ಯಾತ್ಮರಸದುಂಬಿ ಪರಿಪಕ್ವವಾದ ಫಲವೆಂದರೆ 'ಆತ್ಮಸಂಶೋಧನೆ'. ಸದಾಚಾರ ಸುದೀರ್ಘ ಮೌನ ಧ್ಯಾನಾದಿಗಳಿಂದ ಆತ್ಮ ಸಾಕ್ಷಾತ್ಕಾರವಾಗಿ ಚಿನ್ಮಯನನ್ನು ಕಂಡ ಸತ್ಯಸಂಗತಿಯನ್ನು ಅದರಲ್ಲಿ ಚಿತ್ತರಿಸಿದ್ದಾರೆ.

ದಿನಾಲು ಶ್ರೀ ರಾಮಕೃಷ್ಣ ಪರಮಹಂಸರ ದಿವ್ಯ ಸಂಭಾಷಣೆಗಳಿಂದ ಕೂಡಿದ "ವಚನಾಮೃತ" ಗ್ರಂಥವನ್ನು ಓದುವದು ಮಧುರಚೆನ್ನರಿಗೆ ಪರಿಪಾಠವಾಗಿದ್ದು, ಅವರ ಒಂದು ಅನುಭವ ಹೀಗಿದೆ. "ಒಂದು ದಿನ ನೀನು ಕುರಿಯಲ್ಲ ನನ್ನಂತೆ ಸಿಂಹವಿರುವಿ" ಎಂದು ಕುರಿಯ ಹಿಂಡಿನಲ್ಲಿಯ ಸಿಂಹದ ಮರಿಗೆ ಸಿಂಹ ಹೇಳಿದ ಕತೆಯನ್ನು ಓದುತ್ತಿದ್ದಾಗ, ಒಮ್ಮೆಲೆ ನನ್ನ ಕೋಣೆಯಲ್ಲಿ ಸೂಕ್ಷ್ಮ ವಾತಾವರಣದಲ್ಲಿ ಅದೃಶ್ಯರೂಪದಿಂದ ಯಾರೋ ನನ್ನಿದಿರಿನಲ್ಲಿ ಇದ್ದಂತೆ ಅನಿಸತೊಡಗಿತು...ಒಂದು ಪ್ರಕಾರದ ಶಾಂತಿಯೂ ಆನಂದವೂ ಅನುಭವಕ್ಕೆ ಬರತೊಡಗಿದವು. ಬರಬರುತ್ತ ಆ ಅದೃಶ್ಯ ಸಾನಿಧ್ಯವು ಆ ಕೋಣೆಯ ತುಂಬ ಇದೆಯೆಂದು ಅನಿಸತೊಡಗಿದ್ದಲ್ಲದೆ, ನನ್ನ ಶರೀರದ ಒಳಗೂ ಅದು ವ್ಯಾಪಿಸಿಕೊಂಡು ಇದ್ದಂತೆ ಅನಿಸತೊಡಗಿತು... ಒಂದು ವ್ಯೂಹದಲ್ಲಿ ತೇಜಃಪುಂಜ ಛಾಯೆ ಕಾಣಿಸಿಕೊಂಡಿತು." ಮಧುರಚೆನ್ನರ ಕಾರಣ ಶರೀರದ ಪ್ರಜ್ಞಾ ಜಾಗೃತಿಯಾಗಿರಲಿಕ್ಕೆ ಸಾಕು. ಅದನ್ನೇ "ನನ್ನ ನಲ್ಲ"ದಲ್ಲಿ ಹೀಗೆ ವಿವರಿಸಿದ್ದಾರೆ :

"ನಿಶ್ಯಬ್ದ ನಿಶ್ಯಬ್ದ ಶಬ್ದದಾಚೆಯು ಶಬ್ದ
ನಿಶ್ಯಬ್ದವಿದ್ದರೂ ಮೌನವಲ್ಲ
ನಿಸ್ಸೀಮ ನಿಸ್ಸೀಮ ಸೀಮದಲಿ ನಿಸ್ಸೀಮ
ನಿಸ್ಸೀಮವೆಂದರೂ ಶೂನ್ಯವಲ್ಲ.
ಸುತ್ತು ಮುತ್ತಲು ಸ್ಪರ್ಶ ಒಳಗೂ ಹೊರಗೂ ಸ್ಪರ್ಶ
ಕೆಳಗೂ ಮೇಲೂ ಸ್ಪರ್ಶ ಮಧುರಸ್ಪರ್ಶ

ಅತ್ತ ಹೊರಳಲು ಸ್ಪರ್ಶ ಇತ್ತ ಹೊರಳಲು ಸ್ಪರ್ಶ
ಎತ್ತೆತ್ತಲೂ ಸ್ಪರ್ಶ ದಿವ್ಯಸ್ಪರ್ಶ
ಹೇಳಿತಿಳಿಯದ ಸ್ಪರ್ಶ ಕೇಳಿತಿಳಿಯದ ಸ್ಪರ್ಶ
ಗೋಳಿಡುವ ಜೀವನಕೆ ಸಂಜೀವನದ ಸ್ಪರ್ಶ..."

ಮುಂತಾಗಿ 'ಪ್ರಗಾಢ ಸ್ಪರ್ಶ'ದ ಅನುಭವವನ್ನು ಹೇಳಿದ್ದಾರೆ. 'ಆತ್ಮಸಂಶೋಧನವೆಂಬ ಸುದೀರ್ಘ ಲೇಖನದಲ್ಲಿ ಅಂಥದೇ ಒಂದು ದಿವ್ಯ ಸಾನಿಧ್ಯವು ವಾತಾವರಣದೊಳಗೂ, ವ್ಯಕ್ತಿಯ ಹೃದಯದೊಳಗೂ ಸಹ ವ್ಯಾಪಿಸಿಕೊಂಡಿದ್ದಂತೆ ಅನುಭವಕ್ಕೆ ಬಂದುದನ್ನೂ ಅವರು ವರದಿಮಾಡಿದ್ದಾರೆ. ಸಾಮಾನ್ಯ ಜನರ ಸೂಕ್ಷ್ಮ ಶರೀರ ಹಾಗೂ ಕಾರಣ ಶರೀರಗಳು ಅವರ ಸ್ಥೂಲದೇಹದ ಸುತ್ತಮುತ್ತ ಒಂದು-ಒಂದೂವರೆ ಫೂಟು ವ್ಯಾಪಿಸಿರುತ್ತವೆ; ಆದರೆ ಸಾಧಕರ ಕಾರಣ ಶರೀರವು ಒಂದು ಕೋಣೆ ತುಂಬುವಷ್ಟು ದೊಡ್ಡದಿರುತ್ತದೆ ಎಂಬ ಮಾತನ್ನು ನಂಬಲು ಮಧುರಚೆನ್ನರ ಅನುಭವವು ಆಧಾರವಾಗಿದೆ.

ದೇವದೇವನ ಗೂಢವನ್ನರಿಯಬೇಕೆಂಬ, ಬರುವವರ ಕಣ್ಸನ್ನೆಯ, ಬಯಕೆ ಇಷ್ಟಾರ್ಥವನ್ನು ಪಡೆದು ಪೂರ್ಣ

ವಾಯಿತು. ಗಾಢಸ್ಪರ್ಶವಾದ ಸುದಿನದಂದು "ತಂದೆ ನೀ ಕಣ್ತೆರೆವರಂದಿಗರುಣೋದಯವು, ಮುಂದೆ ಸರ್ಯೋದಯದ ಚಿಂತೆಯಿಲ್ಲ" ಎಂದರು. ನಿಶ್ಚಿಂತರಾಗಿ ಒಮ್ಮೆಲೆ ಸುಮ್ಮಸುಮ್ಮನೆ ಅಂತರಾತ್ಮನ ಅನುಭವಕ್ಕಾಗಿ ಅವಸರ ಮಾಡದೆ ಸುದೀರ್ಘವಾದ ತಪಸ್ಸಿನಿಂದ "ಅಣುವಿನಲಿ ಘನಯಿಹುದು ತಪಕೆ ಅದು ಸಿದ್ಧಿಪುದು" ಎಂದುಚ್ಚರಿಸುತ್ತ ತಾಳ್ಮೆವಹಿಸಿ ತಪಸ್ಸನ್ನಾಚರಿಸಿದರು. ಭಾವಸಂಪನ್ನ ಜೀವಿಗಳಾಗಿ ಜ್ಞಾನಶಕ್ತಿ, ಇಚ್ಛಾಶಕ್ತಿ, ಕ್ರಿಯಾಶಕ್ತಿ ಮೊದಲಾದ ದೈವೀಶಕ್ತಿಗಳನ್ನು ಸಂಪಾದಿಸಿಕೊಂಡು ಸರ್ವಗುಣ ಸಂಪನ್ನರಾಗಿ ಸಮರ್ಪಣಮಯವಾದ ಶರಣ ಜೀವನವನ್ನು ಸಾಗಿಸಿದರು. ಆತ್ಮದ ಅನುಭವದ ಮೂಲಕ ದೇಹದಲ್ಲಿಯ ಎಲ್ಲ ಪುರುಷರನ್ನು ಅರಳಿಸಿಕೊಂಡರು. ತಮ್ಮ ಸಮಗ್ರ ಆಧಾರವನ್ನು ಶುದ್ಧ-ಸಿದ್ಧ-ಮುಕ್ತಗೊಳಿಸಿಕೊಂಡು ದೈವೀ ಜೀವನವನ್ನು ನಡೆಸಿದರು. ಕಾಳರಾತ್ರಿಯನ್ನು ಪರಿಹರಿಸಿಕೊಂಡು ಬೆಳಗು ಕಂಡರು. ಬೆಳಗು ಕಾಣಲು ಹೊರಟ ಹಾದಿಯನ್ನು ನಿರ್ಮಿಸಿಕೊಂಡ ರೀತಿ, ನಡೆದು ಬಂದ ಹಾದಿಯಲ್ಲಿ ಪಟ್ಟ ಕಷ್ಟ ನಷ್ಟ, ಇಷ್ಟಾರ್ಥದ ಪ್ರಾಪ್ತಿ, ತೃಪ್ತಿಗಳೆಲ್ಲವನ್ನು 'ಪೂರ್ವರಂಗ', 'ಕಾಳರಾತ್ರಿ', 'ಬೆಳಗು' 'ಆತ್ಮಸಂಶೋಧನ'ಗಳಲ್ಲಿ ವಿವರಿಸಿದ್ದಾರೆ ಸಾಧಕರಿಗಾಗಿ.

## ೬. ಸಾಹಿತ್ಯಾರಾಧಕ

ಕಂಡುದನ್ನು ಬಚ್ಚಿಡದೆ ಮಾನಸಿಕ ವಸ್ತುಗಳನ್ನು ಹೊರ ಗಣದನ್ನಾಗಿ, ಭಾವದ ವಸ್ತುವನ್ನು ಭಾಷೆಯದನ್ನಾಗಿ, ತನ್ನದಾದ ವಸ್ತುವನ್ನು ವಿಶ್ವಮಾನವರದನ್ನಾಗಿ, ಕ್ಷಣಕಾಲದ ವಸ್ತುವನ್ನು ಚಿರಕಾಲದ್ದನ್ನಾಗಿ ಮಾಡುವಾಗ ಮಧುರಚೆನ್ನರು ಜೋಕೆ, ತೂಕ, ಹಿಡಿತಗಳಿಂದ, ನಿಪುಣವಾದ ವಿಶಿಷ್ಟರೀತಿಯಿಂದ ಮಂಡಿಸಿದ ಸಾಹಿತ್ಯವು ಮರಳುಕಾಡಿನಲ್ಲಿ ಮಲ್ಲಿಗೆ ಅರಳಿ ಬಂದಂತಹದಾಗಿದೆ; ಅತ್ಯಮೂಲ್ಯವಾಗಿದೆ, ಅಮೋಘವಾಗಿದೆ. "ಪೂರ್ವರಂಗದಲ್ಲಿ 'ಮಲ್ಲ'ತನವನ್ನು "ಕಾಳರಾತ್ರಿ" 'ಬೆಳಗು" ಗಳಲ್ಲಿ ಚೆನ್ನತನವನ್ನು ತೋರಿಸಿದ್ದಾರೆ. ಈ ಮೂರು ಗ್ರಂಥಗಳಲ್ಲಿ ಅವರ ಆಧ್ಯಾತ್ಮಜೀವನದ ಲಹರಿ ರಮ್ಯವಾಗಿಯೂ, ಭಾವವ್ಯಂಜನದಿಂದ ಕೂಡಿಯೂ ಹರಿದುಬಂದಿದೆ. ದಾಂಪತ್ಯ ಜೀವನ, ಆಧ್ಯಾತ್ಮ ಜೀವನಗಳನ್ನು ಸಮನ್ವಯಿಸಿಕೊಂಡು ಜ್ಞಾನಸಂಚಯ ಮಾಡುತ್ತಲೇ ಪ್ರಭಾವಯುತವಾದ ವ್ಯಕ್ತಿತ್ವವನ್ನೂ ರೂಪಿಸಿಕೊಂಡ ಬಾಳಿನ ಭವ್ಯ ಚಿತ್ರಣವು ಈ ಮೂರು ಗ್ರಂಥಗಳಲ್ಲಿ ಕ್ರಮಕ್ರಮವಾಗಿ ಬಣ್ಣದುಂಬಿ ಮೂಡಿದೆ" ಎಂದು ಪ್ರೊ. ಮಾಳವಾಡರು ಹೇಳಿದ ಮಾತು ಬಹು ಅರ್ಥಪೂರ್ಣವಾಗಿದೆ.

ಗ್ರಂಥರೂಪದಲ್ಲಿ ಬರಬೇಕಾದ 'ಆತ್ಮಸಂಶೋಧನೆ' ಎಂಬ ಸುದೀರ್ಘಲೇಖ 'ನವಯುಗ'ದಲ್ಲಿ ಹದಿನಾಲ್ಕು ಕಂತುಗಳಲ್ಲಿ ಪ್ರಕಟವಾಗಿ ಅವರನ್ನು ಅಮರರನ್ನಾಗಿ ಮಾಡಿದೆ. ಮಧುರಚೆನ್ನರು ಕಣ್ಮರೆಯಾದರೂ ಅವರ ಮಾತು ಬದುಕಿ ಉಳಿದಿವೆ.

ಮಾತುಗಳಲ್ಲಿ ಚೆನ್ನಮಲ್ಲಪ್ಪನವರ ಚೇತೋಹಾರಿ ಆತ್ಮಾನುಭವ ಪೂರಿತ ಆತ್ಮಸಂಶೋಧನೆ ಅಮರವಾಗಿದೆ. ಓದುಗರ ಭಾವ ವನ್ನು ಚೇತರಿಸುತ್ತದೆ, ಚೇತನಗೊಳಿಸುತ್ತದೆ. ಸಾಹಿತ್ಯವೆಂಬುದು ಜೀವನಾವಲೋಕನದಿಂದ ಪ್ರೇರಣೆಗೊಂಡ ಉನ್ನತ ಹೃದಯದ ಮಧುರ ತಂತಿಯನ್ನು ಮಿಡಿದಾಗ ಪ್ರಾದುರ್ಭವಿಸುವ ಅಂತ ರಾತ್ಮನ ಕರೆ ಎನ್ನುವದಕ್ಕೆ ಆತ್ಮಸಂಶೋಧನವೇ ಸಾಕ್ಷಿಯಂತಿದೆ. ಆತ್ಮಸಾಕ್ಷಾತ್ಕಾರ ಅಂತರಾತ್ಮನ ಅಸ್ತಿತ್ವದಿಂದ ಆತ್ಮನು ಬೇರೆ ಗುಣಗಳು ಬೇರೆ ಎಂಬ ಸಾಕ್ಷೀಭಾವವು ಹುಟ್ಟುವದು. ಸಾಕ್ಷೀ ಭಾವದಿಂದ ವಾಸನೆಗಳನ್ನು ನಿಯಂತ್ರಿಸಿಕೊಂಡು ಸದ್‌ಗುಣಗಳ ರಾಜನಾಗಲು ಬರುವದನ್ನೂ ಮನಂಬುಗುವಂತೆ ಮಧುರ ಚೆನ್ನರು ಚಿತ್ರಿಸಿದ್ದಾರೆ.

ಹೃದಯ ಸರೋವರದಲ್ಲಿ ಎಲ್ಲಿಯವರೆಗೆ ವಾಸನೆ ಹಾಗೂ ಸಂಕಲ್ಪ-ವಿಕಲ್ಪಗಳ ತೆರೆಗಳು ಏಳುವವೋ ಅಲ್ಲಿಯ ವರೆಗೆ ಅದರಲ್ಲಿ ಆತ್ಮ ಸೂರ್ಯನ ಪ್ರತಿಬಿಂಬವು ಸರಿಯಾಗಿ ಮೂಡಲಾರದೆಂಬುದನ್ನು ಸ್ಪಷ್ಟಪಡಿಸಿರುವರು. ಮಧುರ ಚೆನ್ನರು. ಸಾಕ್ಷೀಭಾವವನ್ನು ಪ್ರಾಪ್ತ ಮಾಡಿಕೊಳ್ಳುವ ಮುನ್ನ ಬ್ರಹ್ಮಚರ್ಯ ವ್ರತ ಪಾಲಿಸುವಲ್ಲಿ ಪಟ್ಟಪಾಡನ್ನು ಮುಚ್ಚು ಮರೆ ಇಲ್ಲದೆ ಹೇಳಿಕೊಂಡಿದ್ದಾರೆ. "ಭಗವಾನ್ ಶ್ರೀ ಅರ ವಿಂದರ ಪೂರ್ಣಯೋಗಕ್ಕೆ ಬ್ರಹ್ಮಚರ್ಯವು ಅಗತ್ಯವಾದದ್ದು ಎಂದು ಅವರ 'ಯೋಗದ ತಳಹದಿ' ಎಂಬ ಗ್ರಂಥದಲ್ಲಿ ೧೯೩೬ ರಲ್ಲಿ ಓದಿದಾಗಿನಿಂದ ಅದನ್ನು ಸಾಧಿಸಬೇಕೆಂಬ ಯತ್ನಕ್ಕೆ ಬಿದ್ದು ೧೯೪೦ರಲ್ಲಿಯೇ (ನನ್ನ ಪತ್ನಿಯ ಒಪ್ಪಿಗೆಯಿಂದ) ನಾನು ಬ್ರಹ್ಮ ಚರ್ಯ ವ್ರತವನ್ನು ಕೈಕೊಂಡೆನು, ಆದರೆ ಮಧ್ಯೆಮಧ್ಯೆ

ಎಷ್ಟೋ ಸಲ ಸೋತೆನು" ಎಂದು ಸಾಧಕ ಶರಣರಾದ ಆಧ್ಯಾತ್ಮ ವೀರರು ವಿಷಯವಾಸನೆ ಗುಣಗಳ ಪ್ರಭುವಾಗ ಬೇಕೆಂದು ಸಾಧನೆ ನಡಿಸಿದ ಚೆನ್ನಮಲ್ಲರು ಆ ರಣರಂಗದಲ್ಲಿ ಉಂಟಾಗಿದ್ದ ಸೋಲನ್ನು ಒಪ್ಪಿಕೊಂಡಿರುವರು. ಆ ಸೋಲಿನ ಕೋಲಾಹಲವು ಇನ್ನೂ ಸಂಪೂರ್ಣವಾಗಿ ಮುಗಿದಿಲ್ಲವೆಂದು ಹೇಳಿದ್ದಾರೆ. "ಸೋತಾಗಲೆಲ್ಲ ಸಂತಾನೋತ್ಪತ್ತಿಯಾಗಿದೆ, ಸಂತಾನೋತ್ಪತ್ತಿಯಾಗುವದು ಸ್ವಾಮಿಯು ಸಂಕಲ್ಪವೇಬುದು ಸ್ಪಷ್ಟವಿದೆ. ಬಾಪೂಜಿ ಕೂಡ ತಮ್ಮ ಆತ್ಮಚರಿತ್ರೆ (ಸತ್ಯ ಶೋಧನ)ಯಲ್ಲಿ "ನಾನು ಬ್ರಹ್ಮಚರ್ಯೆ ಪ್ರತಿಜ್ಞೆ ಮಾಡಿದ ಬಳಿಕ ಆರು ವರುಷ ಸೋತಿದ್ದೇನೆ. ನನ್ನ ಧರ್ಮಪತ್ನಿಯೇ ನನಗೆ ತಿರುತಿರುಗಿ ಅನೇಕ ಸಲ ಬುದ್ಧಿ ಹೇಳುತ್ತಿದ್ದಳು !" ಎಂದು ಹೇಳಿದ್ದಾರೆ. ಪೂಜ್ಯ ಮಹಾತ್ಮಾಜಿಯವರು ಮಹಾ ಪುರುಷರು. ಅಂಥವರಿಗೇ ಆರು ವರುಷ ಹಿಡಿಯಿತು. ಸಾಮಾನ್ಯನಾದ ನಾನು ಒಂಭತ್ತು ವರುಷಗಳಿಂದ ಗುದ್ದಾಡು ತ್ತಿರುವದು ಸಹಜವಾಗಿದೆ; ನನಗೂ ನನ್ನ ಪತ್ನಿಯೇ ಈ ವಿಷಯದಲ್ಲಿ ಬುದ್ಧಿ ಹೇಳುತ್ತಿದ್ದಾಳೆ."

"ನೈತಿಕ ಕ್ರಾಂತಿಯೊಂದು ಬಂದುಹೋಯಿತು. ಬೌದ್ಧಿಕ ಕ್ರಾಂತಿಯೂ ಒಂದು ಬಂದುಹೋಯಿತು. ಅದರಂತೆ ಭೌತಿಕ ಕ್ರಾಂತಿಯೂ ಬಂದು ಬಂದುಹೋಯಿತು. ಪೃಥ್ವಿಯ ಮೇಲೆ ಅವೆಲ್ಲವುಗಳಿಂದಲೂ ಎಷ್ಟೋ ಕೆಲಸವಾಯಿತು. ಆದರೆ ಇನ್ನು ಆತ್ಮಿಕ ಕ್ರಾಂತಿಯು ಬರುವುದಿದೆ. ಇದರಿಂದ ಅವೆಲ್ಲವುಗಳಿಗಿಂತ ಹೆಚ್ಚಿನ ಕಾರ್ಯವಾಗುವದು" ಎಂದು ಶ್ರೀ ಅರವಿಂದರ ಒಂದು ದಿವ್ಯ ವಚನವಲ್ಲಿಯ ಭವಿಷ್ಯವಾಣಿಗೆ ಮಧುರಚೆನ್ನರು ಮೊದಲ ನೆಯ ಸಾಕ್ಷಿಯಾಗಿದ್ದಾರೆ.

ಧ್ಯಾನ ಮಾಡುವಾಗ ಅನೇಕ ವಿಚಾರಗಳು ಸುಳಿಯು
ತೊಡಗಿದರೆ ಅವುಗಳಿಗೆ ಮಧುರಚೆನ್ನರು ಹೀಗೆ ಹೇಳುತ್ತಿದ್ದ
ರಂತೆ—"ನಿಮ್ಮದು ಈಗೇನೂ ಕೆಲಸವಿಲ್ಲ ಹೋಗಿರಿ. ನಿಮ್ಮ
ಸಲುವಾಗಿ ಉಳಿದ ವೇಳೆ ಬೇಕಾದಷ್ಟಿದೆ. ಆಗ ನೀವು ಬರ
ಬಹುದು. ಈ ಕೆಲ ನಿಮಿಷದಲ್ಲಿ ನಿಮ್ಮ ಕೆಲಸವಿಲ್ಲ ಎಂದು ಹೇಳಿ
ಗದರಿಸುತ್ತಿದ್ದೆ. ಅದರಿಂದ ಅವು ಮಾಯವಾಗುತ್ತಿದ್ದವು.
ಆಮೇಲೆ ಹೃದಯದಲ್ಲಿ ಬೇರೆ ಬೇರೆ ಪ್ರೇಮ ಕೋಪಾದಿ
ಭಾವನೆಗಳಿದ್ದರೆ ಅವುಗಳಿಗೂ ಹಾಗೆ ಹೇಳಿ ಗದರಿಸುತ್ತಿದ್ದೆನು.
ಅದ್ದರಿಂದ ಅವು ಮಾಯವಾಗುತ್ತಿದ್ದವು. ಆಮೇಲೆ ಪ್ರಾಣದಲ್ಲಿ
ಏನಾದರೂ ಆಶೆ ಅಪೇಕ್ಷೆಗಳಿದ್ದರೆ ಅವುಗಳಿಗೂ ಹಾಗೆಯೇ
ಹೇಳಿ ಗದರಿಸುತ್ತಿದ್ದೆ. ಅದರಿಂದ ಅವು ಓಡಿ ಹೋಗುತ್ತಿದ್ದವು.
ಕೊನೆಗೆ ದೇಹದಲ್ಲಿ ಆಸರು, ಬೇಸರು, ದಣಿವು ಮುಂತಾದವು
ಗಳು ಕಂಡುಬಂದರೆ ಅವುಗಳಿಗೆ 'ಇದೆಲ್ಲಾ ಸುಳ್ಳು. ಎಲಾ
ದೇಹವೇ, ನಿನ್ನನ್ನೂ ಈಗ ಈ ಕೆಲಸದಿಂದ ಬಿಡಿಸಿದರೆ ಕೂಡಲೆ
ಇಲ್ಲದ ಕಾರಭಾರಗಳ ಸಲುವಾಗಿ ಬೇಕಾದಷ್ಟು ಓಡಾಡುವಿ.
ಈಗ ಧ್ಯಾನಕ್ಕೆಂದರೆ ಬೇಕೆಂತಲೇ ನೀನು ಸುಳ್ಳು ನೆವ ತೆಗೆದಿರುವಿ
ನಾನೇನೂ ಕೇಳುವದಿಲ್ಲ ಈ ಕೆಲ ಮಿನೀಟು ನಾನು ಧ್ಯಾನ
ಮಾಡತಕ್ಕವನೇ. ನಿನ್ನ ನೆವಗಳನ್ನು ಕಟ್ಟಿ ಇಡು' ಎಂದು ಗದರಿ
ಸುತ್ತಿದ್ದೆನು. ಕೂಡಲೆ ಅವು ನಿಂತು ಹೋಗುತ್ತಿದ್ದವು. ಹೀಗೆ
ಬುದ್ಧಿ-ಹೃದಯ ಪ್ರಾಣ-ದೇಹ ಎಲ್ಲವೂ ಸ್ತಬ್ಧವಾಗಲು
ಒಮ್ಮೆಲೆ ಒಂದು ಮಹಾಸ್ತಬ್ಧತೆಯು ಅನುಭವಕ್ಕೆ ಬರುತ್ತಿತ್ತು.
ಅದು ಸಮರಾತ್ರಿಯಲ್ಲಿ ಎಲ್ಲಾ ಹೇಗೆ ಸ್ತಬ್ಧವಾಗಿರುತ್ತದೆಯೋ
ಹಾಗಿರುತ್ತಿರುವ'ದೆಂದು ಮಧುರಚೆನ್ನರು ಅನುಭವದ
ಮಾತನ್ನು ಹೇಳಿದಾರೆ.

ಪ್ರಕೃತಿಯ ಚಲನವಲನವನ್ನೆಲ್ಲಾ ನಿಲ್ಲಿಸಿ ಪುರುಷನನ್ನು ಜಾಗೃತ ಗೊಳಿಸಬೇಕಾದರೆ ನಿಶ್ಶಬ್ದತೆ ಮಹಾಮೌನ–ಪ್ರಗಾಢ ಶಾಂತಿಯನ್ನು ಕಾಪಾಡಿಕೊಳ್ಳಬೇಕಾದರೆ ಧ್ಯಾನವನ್ನು ಮೆಚ್ಚಿ ಮೆಚ್ಚಿ ಮುನ್ನಡಿಯಿಡಬೇಕು. ಬೆಳಕಿನೊಳಗಿನ ಬೆಳಕನ್ನು ಕಂಡು ಮಂಡಿಸುವಲ್ಲಿ ಅವರ ಹೃದಯದ ಉನ್ನತಿಯು ವ್ಯಕ್ತವಾಗಿದೆ. ಆಗ "ಮಾನವ ನೀನತಿ ಮತಿಯುತನೆನಿಸುತೆ ಧ್ಯಾನವ ಮಾಡೋ, ನಿಜ ಗುರುವಿನ ಧ್ಯಾನವ ಮಾಡೋ" ಎಂದು ಕರೆದಿದ್ದಾರೆ.

ಅವರ ಕರೆಯ ಧ್ವನಿಯು ಮಧುರವಾಗಿದೆ. ಆಳವಾಗಿದೆ, ವಿಶಾಲವಾಗಿದೆ. ಉತ್ಕಟ ದೈವೀ ಹಂಬಲ ಅಪ್ರತಿಹತ ನಿಷ್ಠೆ ಶ್ರದ್ಧೆಗಳಿದ್ದು ಅಮರವಾಣಿ ಪ್ರಸಾದ ವಾಣಿಯಾಗಿದೆ. ಮಂತ್ರ ಶಕ್ತಿಯುತವಾಗಿದೆ.

ಒಟ್ಟಿನಲ್ಲಿ ಕಲೆಗಾಗಿ ಕಲೆ ಎಂಬ ಉಕ್ತಿಯನ್ನು ಅವರು ಪೂರ್ಣ ಅರಿತು ಆಚರಿಸಿದರು. ಮಧುರಚೆನ್ನರೆಂಬ ಜೇಂಗುಲಾಬಿಯಲ್ಲಿಯಲ್ಲಿಯ ಮಕರಂದವನ್ನು ಸವಿದುಹೊರಬಂದ ಸಾಹಿತ್ಯ ತುಂಬಿಯು ದುಃಖದ ಆವೇಗವನ್ನಾಗಲೀ, ಆನಂದದ ಅತಿರೇಕವನ್ನಾಗಲಿ ಇಲ್ಲವೆ ಸುಖದುಃಖಗಳ ಸಮಷ್ಟಿಯನ್ನಾಗಲೀ ಕೇಳಿಸುತ್ತಿರುವ ಝೇಂಕಾರ ಧ್ವನಿಯಲ್ಲಿ ವೈಶಿಷ್ಟ್ಯವಿದೆ. ಹಸುಗೂಸಿಗೂ ಅರ್ಥವಾಗಬಲ್ಲ ಅರ್ಥವತ್ತಾದ ಅನನ್ಯತೆಯಿಂದ ಕೂಡಿದ ಅವರ ಕೃತಿಗಳಲ್ಲಿ ಎಲ್ಲೆಲ್ಲಿಯೂ ನೈಜತೆ ತುಂಬಿಕೊಂಡಿದೆ. ಪ್ರತಿಭೆ ಆಳವಟ್ಟಿದೆ. ಪ್ರತಿಭೆಯ ವಿಷಯಕ್ಕೆ ಅವರೇ "ಹಾಡಬೇಕೆಂದೆ ಸೊದಿನ ಬಯಸಿ ಬೇಡಿದರೆ ಒಂದು ನುಡಿಯುಕೂಡ ಮೂಡಲಿಲ್ಲ. ಹಾಡಿಮುಗಿಸೇನೆಂದರಿಂದು ನುಡಿ

ನಿಲ್ಲದಿದೆ ನಿನ್ನೊಸಹಿನೊಯಸ್ಸಾರೆ ತಿಳಿಯದಲ್ಲಾ" ಎನ್ನುವಂತಾ ಗಬೇಕಾದರೆ ಮಧುರಚೆನ್ನರ ಆಳವಾದ ಅಭ್ಯಾಸ ಬಲವನ್ನು ಪಡೆದ ಪ್ರತಿಭಾಪಕ್ಷಿ ಸುಮ್ಮನೇಕೆ ಕೂಡ್ರಬಲ್ಲುದು ?

ಅವರ ಕೊನೆಯುಸಿರಿನವರೆಗೂ ಲೇಖನಿಯು ಮುಖಾಂತರ ಪ್ರತಿಭಾಯುಕ್ತ ಸಾಹಿತ್ಯವಾಹಿನಿ ಹರಿದಿದ್ದಾಳೆ. "ಅಂದು ನಿನ್ನುಬ್ಬಿನಲಿ ನೀನಿದ್ದು ಲೆಕ್ಕಿಸದೆ, ಇಂದು ನೀನೆ ಬಂದಿ ಯಾತಕಾಗಿ" ಎಂದು ಮಧುರಚೆನ್ನರು ಪ್ರತಿಭಾ ಸಸಿಗೆ ನೀರೆರದ ಸಾಹಿತ್ಯ ಇಂತಿದೆ: ಗೀತೆ, ಉಪನಿಷತ್ತು, ಪಂತಜಲಿಯ ಯೋಗ ಶಾಸ್ತ್ರ, ಆಯುರ್ವೇದ, ಜ್ಯೋತಿಷ್ಯ ಗ್ರಂಥಗಳು; ಖಲೀಲ ಗಿಬ್ರಾನ, ಉಮರಖಯಾಮ; ಮತ್ತು ರವೀಂದ್ರನಾಥ ಠಾಕೂರರ ಸಮಗ್ರ ಗ್ರಂಥಗಳು; ಅರವಿಂದಾಶ್ರಮದಲ್ಲಿಯ ಸಾಹಿತಿಗಳ ಕೃತಿಗಳು, ಪಿಲಿಗ್ರಿಮ್ಸ ಪ್ರೊಗ್ರೆಸ್. ಇತರ ಭಾಷೆಗಳಲ್ಲಿಯ ಮಹಾ ಗ್ರಂಥಗಳ ಗೊಬ್ಬರ ಹರವಿ, ವಚನಶಾಸ್ತ್ರ, ದಾಸ ಸಾಹಿತ್ಯ ಮತ್ತಿತರ ಆಧ್ಯಾತ್ಮ ಗ್ರಂಥಗಳ ನೀರೆರೆದಾಗ ಹೂವು ಹಣ್ಣಾದಾಗ ಪ್ರತಿಭೆ ಪಕ್ಷಿ ಸುಮ್ಮನಿರಬಲ್ಲುದೇ ? ಮಿಡಿ ತಿಂದು ಹಾಡಗಲಿತ ಹಕ್ಕಿ ಪರಿಪಕ್ವ ಫಲ ತಿಂದು ಮೈದುಂಬಿ ಮನ ತುಂಬಿ ನಲಿದು ಉಲಿಯುವದು ಸಹಜ. "ಲೇಸಿನೊಡತಿಯು ನೀನು ಹಿಗ್ಗಿನಾ ಹಾಲುಂಡು ಹೂವಿನಾ ಹಾಸಿಗೆಯ ತುಳಿದ ರಾಣಿ" ಎಂದು ಕರೆದರು.

ಏನಮ್ಮ ಪ್ರತಿಭೆ ನೀನೀಸುದಿನವೆಲ್ಲಿದ್ದಿ
ಮತ್ತೆ ಹೇಗಿಲ್ಲಿಗೆ ಮರಳಿ ಬಂದೆ ?
ದಾನಮ್ಮ ನೀನೊಲಿಯೆ ಕೊರಡು ಕೊನರುವದೆಂದೆ
ಬರಡು ಹಯನವಾಗಲೂ ಬಲ್ಲದೆಂದೆ.

ಹೀಗೆ ಮಧುರಚೆನ್ನರೆಂಬ ಗೋವು ಕರೆದಿಟ್ಟ ಸಾಹಿತ್ಯ ಕ್ಷೀರವು ಕನ್ನಡ ಜನರ ಆಧ್ಯಾತ್ಮ ಹಸಿವನ್ನು ಹಿಂಗಿಸಿದೆ.

"The highest manifestation of language is Mantra, the language in which there is the closest correspondence between music and meaning, and thought and image and in which the instinctive life of man gets expressed with the ease and naturalness of the instinctive life. Again, it will be a fusion of the high est meaning and the most magnificient music of the profoundest thought and the grandest Image."

ಇಂತೆಂದು ಆದರ್ಶಭಾಷೆಯ ವಿಷಯಕ್ಕೆ ಕವಿ ವಿನಾಯಕರು ತಮ್ಮ "Poetic Approach to Language" ಎಂಬ ಗ್ರಂಥದಲ್ಲಿ ಹೇಳಿದ ಭಾಷಾಮಾನದಂಡದಿಂದ ಮಧುರಚೆನ್ನರು ಬಳಸಿದ ಭಾಷೆಯನ್ನು ಅಳೆದರೆ ಅದು ಆದರ್ಶ ಭಾಷೆಯೆಂಬುವದರಲ್ಲಿ ಸಂದೇಹವಿಲ್ಲ.

ಕೊಳನ ತಡಿಯೊಳಾಡುವ ಹಂಸಗಳಿರಾ ನೀವು ಕಾಣಿರೇ ನೀವು ಕಾಣಿರೇ, ಗಿರಿ ಗಂಹರದೊಳಾಡುವ ನವಿಲುಗಳಿರಾ ನೀವು ಕಾಣಿರೇ ನೀವು ಕಾಣಿರೇ, ಕಂಡರೆ ಕರೆದು ತೋರಿರೆ. ಬೆಳದಿಂಗಳೇ ಕೋಗಿಲೆಯೆ ನಿಮ್ಮನೆಲ್ಲರನು ಒಂದು ಬೇಡವೆನು; ಚೆನ್ನಮಲ್ಲಿಕಾರ್ಜುನನ ಇರವು ತೋರಿರೆ; ಎಂದು ಅಕ್ಕನು ಪಳುಂಬಿ ಗೋಳಿಟ್ಟು ಕೇಳಿದಳಂತೆ. ಮಧುರಚೆನ್ನರ 'ನನ್ನ ನಲ್ಲ' ಕಾವ್ಯದಲ್ಲೂ ಅದನ್ನೇ ಕಾಣಬಹುದು.

ಆರದಾರತಿ ಹಿಡಿದು ಹಾರುತಿರುವವಳಾರೆ
ಪೊನ್ನಿ ಏ ಪೊನ್ನಿ ನೀನಾರೆ ಬಾರೆ
ಯಾರಿಗಾರತಿ ಒಯ್ದಿ ಹೇಳೆ ನಾನು ಬರುವೆ
ನನ್ನರಸನಿದ್ದಾನು ಅಲ್ಲಿಯಾರೇ

ಮಾಣಿಕದ ಮೂಗಿನವ ವೈಪಚ್ಚರತ್ನದವ
ಪಂಣು ಕುಕ್ಕುತ ಹಾರುವಣ್ಣ ಬಾರೊ
ಜಾಣ ರಂಗಯ್ಯ ತಾ ಕಾಣದಡಗಿಪನೆಲ್ಲಿ
ಗಿಣಿರಾಮ ನೀನಾರೆ ಸುದ್ದಿಬೀರೊ

ಬಿರುಗಂಣ ಮಲ್ಲಿಗೆಯು ಸರಿಯೆ ನಿನಗೀಮಾನ
ಕಂಣೆಲ್ಲದವರು ಕಂಡಿಲ್ಲದಿರಲಿ
ಸಿರಿವಂತರಾ ಮಗಳು ಸೊರಗಿ ಸಾಯುತಲಿರುವೆ.
ಪುರುಷನೆಡೆ ಹೇಳಮ್ಮ ಪುಣ್ಯಬರಲಿ.

ನನ್ನ ನಲ್ಲನ ನೆನವು ಮನವ ಮುತ್ತಿಕ್ಕಿರಲು
ಹಗಲು ಇರುಳಾಗುವದು ತಾನೆ ಅರಿದೇ
ನನ್ನ ರಾಯನ ಚಿಂತೆ ಎವೆಯಿಕ್ಕಗೊಡದಿರಲು
ನನಗಾಗ ಹಗಲು ಇರುಳಾಗದಿರದೇ

ದೇವರಾಯನ ಹೆಸರನೇಕೆ ಕೇಳಿದೆನಮ್ಮಾ
ನಾನೇಕೆ ನಂಜುನುಂಗಿದೆನೆ ತಾಯಿ !
ಯಾವ ಕಡೆಗೂ ಮಗ್ಗಲೂರಗೊಡದಮ್ಮಯ್ಯ
ಈ ನೋವನಾ ತಾಳಲೆಂತು ತಾಯೀ

ಬೇಯುವೆನು ಬಾರೆಂದೆ ನೋಯುವೆನು ಬಾರೆಂದೆ
ಸಾಯುವೆನು ಸಲಹು ಬಾರೆಂದು ಕರೆದೆ
ತಾಯಿ ನೀ ಬಾರೆಂದೆ ತಂದೆ ನೀ ಬಾರೆಂದೆ
ಪರದೇಶಿಯನು ಪಾಲಿಸೆಂದು ಮೊರೆವೆ.

"ಮಾನವ ಪ್ರಪಂಚದಲ್ಲಿ ದೇವನನ್ನರಿಸಿ ಕಾಣದೇ ಪ್ರಕೃತಿ ದೇವಿಯಾದರೂ "ನನ್ನ ನಲ್ಲನನ್ನು" ತೋರಿಯಾಳು ಎಂದು ಹಂಬಲಿಸಿ ಆರ್ತಧ್ವನಿಯಿಂದ ಚೀತ್ಕರಿಸುವ ಹೃದಯದ ಮಧುರ ಸಂಕಟ ನಿಜವಾಗಿಯೂ ರಸಸ್ಫುರಿಯಾಗಿ ಹರಿದಿದೆ. ಪರಾ ಪ್ರಕೃತಿಯು ಪೃಥ್ವಿಯಲ್ಲಿ ಮೈವೆತ್ತಿರುವಳೆಂದು ಮಧುರಚೆನ್ನರ ಅನುಭವದ ಅನನ್ಯತೆಯಿಂದಾಗಿ "ನನ್ನ ನಲ್ಲ"ವು ಶ್ರೇಷ್ಠ ಕಾವ್ಯ ಗಳ ಸಾಲಿನಲ್ಲಿ ತನ್ನದೇ ಆದ ಕಾಂತಿಯಿಂದ ಕಂಗೊಳಿಸುತ್ತಿದೆ; ಎಂದು ಕವಿ ವಿನಾಯಕರು ಹೇಳಿದ ಮಾತುಗಳಲ್ಲಿ ಸತ್ಯವಿದೆ. ಒಟ್ಟಿನಲ್ಲಿ "ನನ್ನ ನಲ್ಲ" ಕಾವ್ಯವು ಮೋಹನ ಭೀಷಣತೆಯಿಂದ ಪ್ರಶಾಂತ ಪ್ರಬುದ್ಧತೆಯಿಂದ ಮಿಳಿತವಾಗಿರುವ ಮಧುರ ಚೆನ್ನರ ಜೀವನದ ಯಥಾರ್ಥತೆಯನ್ನು ನ್ಯಾಯರೀತಿಯಲ್ಲಿ ನಾದಗೊಳಿಸಿದ್ದ ಕಿನ್ನರಿಯ ಧ್ವನಿಯಾಗಿದೆ.

ಏಳಮ್ಮಾ ಏಳಮ್ಮಾ ಏಳೆನ್ನ ತಾಯಮ್ಮಾ
ಏಳದೆ ಜೀವ ಕೇಳದೆ ಏಳಮ್ಮಾ
ಏ ಮಲಗಿರುವ ತಾಯಿ ಪೃಥಿವೀ,
ಮೊಲೆ ಹಾಲು ಸಾಕಮ್ಮಾ ಸವಿಲಾಲಿ ಬೇಕಮ್ಮಾ
ಮುದ್ದಾಡಿ ರಮಿಸಿ ಮೈದಡವಿ ಏಳಮ್ಮಾ
ಮಲಗಿರುವ ತಾಯಿ ಪೃಥಿವೀ

ಮುಂತಾಗಿ ಅದೇ ಹಸಿವೆಯಿಂದ ಹಾಡಿದ ಈ ಭಾವಗೀತೆಯನ್ನು

ಮಧುರಚೆನ್ನರ ಕಾವ್ಯಾಂಗನೆಯು ಶಿರೋರತ್ನವೆಂದು ಅವರ ಕಣ್ಣಿಗೆ ಬೆಳಕುಕೊಟ್ಟ ಅಣ್ಣ ಶ್ರೀ ಬೇಂದ್ರೆಯವರು ಕರೆದುದು ಸರಿಯಲ್ಲವೆನ್ನುವವರುಂಟೇ ?

ಆದರ್ಶವಿದ್ಯಾರ್ಥಿಯಾಗಿ ಸದ್ಗೃಹಸ್ಥರಾಗಿ ಉತ್ತಮ ಸಾಧಕರಾಗಿ ಶ್ರೇಷ್ಠ ಸಾಹಿತಿಗಳಾಗಿ ಉತ್ಕಟವಾದ ಭಾವನೆಯ ಆಧ್ಯಾತ್ಮಿಗಳಾಗಿ ಸಿದ್ಧಪುಂಗವರಾಗಿ ಶರಣಜೀವಿಗಳಾಗಿ ಐಕ್ಯ ಸ್ಥಲ ಮುಟ್ಟುವವರೆಗೂ ವಿಜಯಶೀಲರಾಗಿ ಶಿವೈಕ್ಯರಾದ ಮಧುರಚೆನ್ನರ ವ್ಯಕ್ತಿತ್ವವು ಅಸಾಧಾರಣವಾಗಿದೆ, ಅಗಾಧ ವಾಗಿವೆ, ಅಸದೃಶವಾಗಿದೆ, ಅಮೋಘವಾಗಿದೆ.

ಚೆನ್ನಮಲ್ಲಪ್ಪನವರ ಪ್ರೇಮ, ನುಡಿ-ನಡೆ ಆಳವಾದ ಅಭ್ಯಾಸ, ಕಲಾಪ್ರತಿಭೆ. ಕಳೆಯ ಆರಾಧನೆ ಅನುಕರಣೀಯ ವಾಗಿದೆ. ಅಜರಾಮರವಾದ ಕೃತಿಗಳನ್ನು ಬಿಟ್ಟು ದೇಹ ತೊಟ್ಟು ಬಂಲೆಂದು ದೇಹಬಿಟ್ಟು ಹೋದವರನ್ನು ಸತ್ತರೆಂದರೆ ಸಲ್ಲದು. ಮರೆಯಲಾಗದ ಆ ಮಧುರಚೆನ್ನರ ಮಧುರಜೀವನಕ್ಕೆ ಮನಸೋತು ಆ "ನನ್ನ ನಲ್ಲ"ನೇ ಕೈಚಾಚಿ ತನ್ನೆಡೆಗೆ ಸೆಳಕೊಂಡ ನೆನ್ನಬೇಕಲ್ಲವೇ ! 'ನಡೆಚೆನ್ನ, ನುಡಿಚೆನ್ನ, ಎಲ್ಲಿ ನೋಡಿದಡೆ ಚೆನ್ನ, ಪ್ರಮಥರೊಳಗೆ ಚೆನ್ನ, ಪುರಾತನರೊಳಗೆ ಚೆನ್ನ ! ಸವಿಯ ನೋಡಿ ಅಂಬಲಿಯು ರುಚಿಯಾಯಿತ್ತೆಂದು ಕೂಡಲ ಸಂಗಮದೇವ ತನಗೆ ಬೇಕೆಂದ. ಈ ಮಾತು ಮಧುರಚೆನ್ನ ರಿಗೂ ಅನ್ವಯಿಸುತ್ತದೆ. ದೇವರ ಪ್ರೀತಿಗೆ ಪಾತ್ರರಾದವರು ಮಧುರಚೆನ್ನರು. ಅವರು ಇಷ್ಟೊಂದು ಚೆನ್ನರಾಗುವದಕ್ಕೆ ಮಾತೆ, ಸತಿ, ಸ್ನೇಹಿತರು, ಶ್ರೀಗುರು ಅರವಿಂದರು—ಇವರೇ ಕಾರಣರು.

# ಮಧುರಚೆನ್ನರ ನುಡಿಮುತ್ತುಗಳು

ಬರುವುದೇನಿದೆಯೋ ಅದು ಬಂದೇ ಬರುತ್ತದೆ
ಬಯಕೆ ಬರುವವರ ಕಣ್ಸನ್ನೆ ಕಾಣೋ.
ಆಗುವದೆಲ್ಲವೂ ನಮ್ಮ ಹಿತಕ್ಕೆ ಆಗುತ್ತದೆ.
ಶಾಂತಿಮಂತ್ರ ಪಠಿಸಬೇಕು.

ಎಲ್ಲರನ್ನೂ ಪ್ರೀತಿಸು.
ಸಂಕಲ್ಪಿಸು, ಆದರೆ ಫಲವನ್ನು ದೇವರೆಡೆಗೆ ಬಿಟ್ಟುಕೊಡು
ವೈರವನ್ನು ಪ್ರೀತಿಯ ಮೂಲಕ ಗೆಲ್ಲು.
ಬುದ್ಧಿವಾದದಿಂದ ಮಾತ್ರ ಇತರರ ಮನಃಪರಿವರ್ತನೆ
ಸಾಧ್ಯ.
ನ್ಯಾಯಸ್ಥಾನಕ್ಕೆ ಹೋಗದೆ ನ್ಯಾಯವನ್ನು
ಬಗೆಹರಿಸಬಹುದು.
ದುಃಖ ದುಷ್ಟತನಗಳು ಒಳ್ಳೇಯವರ ಒಳ್ಳೆಯತನವನ್ನು
ಹೆಚ್ಚಿಸುವದಕ್ಕಾಗಿಯೇ ಇವೆ.

# ಪುಷ್ಪಾಂಜಲಿ

ುದ್ಧ ಮನದ ಮಡಿಯಲೊಂದು
ಚಲ ಭಕ್ತಿ ಬೀಜ ಊರಿ
ರ್ಮದೊಂದು ದೇಟಿಗೆ
ಜ್ಞಾನಲತೆಯನೇರಿಸಿ
ರಾಗಲತಾ ಕುಸುರಿಸಿ
ಸ್ವಾನುಭವದ ಸುಮವನೆತ್ತಿ
ಾಡದೇವಿಗರ್ಪಿಸಿ
ಪರಿಮಳವನು ಬೀರಿದೆ
ೀ ಜಗವ ತಣಿಸಿಹೆ

ಅರವಿಂದ ಮಕರಂದ
ಅಮೃತದಲಿ ಮಿಂದು
ಪಂಚಭೂತ ದೇಹಬಿಟ್ಟು
ಇಷ್ಟಪತಿಯನಪ್ಪಿಹೆ
ತೊಟ್ಟ ಅಂಗ ಬಿಟ್ಟು ಇಂದು
ಲಿಂಗಸಂಗಿಯಾಗಿಹೆ

ಲ್ಲಿ ‘ನನ್ನ ನಲ್ಲ’ನೆಂದು
ಲ್ವರೂಹ ದೇವಗೊಲಿದು
ಲ್ಲಿ ಅಲ್ಲಿ ಎಲ್ಲ ಕಡೆಗು
ಂಬಿದಾತನಂತಸ
ೂಡಲೋಡಿದಾತನ
ಡೆಯಕಂಡ ಚೆನ್ನನ

ಚಂದನ ವನ ಜೀವನ
ಪಡೆದ ನಾಡು ಪಾವನ
ಕವಿಗೆ ನಾಡ ವಂದನಾ
ಮನವ ಕದಡಿ ಕಂದನ
ಏಕೆ ಬಂದೆ ಕ್ರಂದನ ?
ಚೆನ್ನಮಲ್ಲರಿಲ್ಲವೆಂದು
ಮಧುರ ಮಾವು ಉದುರಿತೆಂದು
ಚದುರಿಹೋದ ಮಧುರಚೆನ್ನ
ಧರೆಗೆ ಮರಳಿ ಬಾರನೆಂದು
ಅಳುಕಿನಿಂದ ಅಳುವುದೇಕೆ ?
ಅಳಲಿನಾಳ ಅಳೆಯಬೇಕೆ ?

ಚೆನ್ನನಾಡ ಕಣದಲಿ
ಚೆನ್ನನ ಪ್ರತಿ ನುಡಿಯಲಿ
ಸತ್ಯ ಸಾಲು ಸಾಲಿನಲ್ಲಿ
ಮಧುರಮಾತು ಮಾತಿನಲ್ಲಿ
ಮಲ್ಲನ ಪ್ರತಿಕೃತಿಯಲಿ
ಗುರುವಿನುಸಿರು ತುಂಬಿದೆ
ಕಾವ್ಯದ ರಸ ಸೂಸಿದೆ

ಪ್ರಾಣರೇಣು ಅಡಗಿದೆ
ಡೇರೆಹೂವ ಬುಡದಲಿ
ಆತ್ಮಜ್ಯೋತಿ ಬೆಳಗಿದೆ
ಧ್ರುವತಾರೆಯಂತೆಯೆ

ನಿತ್ಯನಿಚ್ಚ ಬಾಳಕುಸುಮ
ಪರಿಮಳವನು ಬೀರಿದೆ

ಮರ್ತ್ಯ ದೇವ ಲೋಕದಲ್ಲಿ
ಚಿರದ ಎರಡು ಬಾಳು ಬಾಳಿ
ಸರಸಹೃದಯದ ಜೀವನಾತ್ಮನೊಡನೆ
ನಾಡನೆಲ್ಲ ಸುತ್ತಿಬರಲು
ವಿಹಾರಕ್ಕೈದಿಹೆ

ಅಗಣಿತ ಬ್ರಹ್ಮಾಂಡವಲೆದು
ತಿರುಗಣಿಮಡು ದಾಟಿಕೊಂಡು
ಭವಸಾಗರದೀಜಿ ಬಂದು
ಕಾವ್ಯದಾನಂದವುಂಡು
ಚಿರಪಯಣಕೆ ದಡವ ಕಂಡು
ಪ್ರಣಯದಾಟ ಪ್ರಿಯನ ಕಂಡು
ಭಕ್ತಿ ಪ್ರಿಯನ ಕೂಡಿಹೆ

ಹೋಗಿ ಬಾ ಬೇಗ ಬಾ
ನಿದ್ರೆಗೈದು ಎದ್ದು ಬಾ
ಹೊಸತು ಬೆಳೆಯ ಫಲಿಸ ಬಾ
ಹದುಳಕೋರಿ ತರಳನೆದೆಯ
ತುಂಬಿ ತುಂಬಿಯಾಗಿ ಬಾ

ಶುದ್ಧ ಮನದಿ ವೃದ್ಧಿಸಿ
ಭಕ್ತಿಭಾವ ಪುಳುಕಿಸಿ

ಘೃತಶಾಕದ ಪಾಕದಿ
ಮಧುರಸವನು ಬಡಿಸ ಬಾ
ಬಂಡುಂಬುತ ಆಡುವೆ
ನಿನ್ನಿನಿಯ ಹಾಡು ಹೇಳುವೆ
ನಿನ್ನ ನವಿಲನೋಡಿ ನಲಿವೆ
ಅದರ ಕಣ್ಣನೆಣಿಸುವೆ
ಜೊಂಜಾಟದಿ ಝೋಂಕರಿಸಿ
ಭೋಂಕಾರವ ನಡುಗಿಸಿ
ಓಂಕಾರವ ಕೇಳಿಸಿ
ಝುಂ ತೋಂ ತತಾ ಧಿನ್ ಧಿನ್
ತಝ್ಝಣಾ ಝಣ ಝಣ್ ಝಣ್
ತಾಳಕೆ ಕರ ತಟ್ಟುವ
ತರನನನನ ಎಂದುಲಿಯುವ
ತರಳನ ತೊದಲ್‌ನುಡಿಗೇಳ್ ಬಾ
ಶುದ್ಧಾತ್ಮದ ವಂದಿತ ಗುರು
ನುಡಿ ತಿದ್ದಲು ಬೋಧಿಸ ಬಾ.

—ಬಸವರಾಜ ನರೇಗಲ್

## ಉಪನ್ಯಾಸ ಗ್ರಂಥಮಾಲೆಯ
## ಕೆಲವು ಪ್ರಕಟನೆಗಳು

---

೧. ನಿಜಗುಣ ಶಿವಯೋಗಿಗಳ ಭಕ್ತಿ, ಜ್ಞಾನ, ವೈರಾಗ್ಯ
—ಪಿ. ಎಂ. ಸಿದ್ಧಯ್ಯ

೨. ಶರಣರ ಕಾಯಕ ತತ್ತ್ವ
—ಎಂ. ಪಿ. ಎಂ. ಶಾಂತವೀರಯ್ಯ

೩. ಜನಪದ ಸಾಹಿತ್ಯದಲ್ಲಿ ನೀತಿ
—ಎಂ. ಎನ್. ವಾಲಿ

೪. ವೇದಗಳು, ವೇದಾಂಗಗಳು ಮತ್ತು ವೇದಾಂಗ ತತ್ತ್ವ
—ಬಿ. ಎನ್. ಕೃಷ್ಣಮೂರ್ತಿ

೫. ಇಂಗ್ಲೀಷ ಸಾಹಿತ್ಯದಲ್ಲಿ ಹಾಸ್ಯ
—ವ್ಹಿ. ಕೆ. ನವಲಗುಂದ

೬. ಶರಣ ಸಾಹಿತ್ಯ
—ಬಿ. ಎಸ್. ಗೊರವರ

೭. ದಾಸ ಸಾಹಿತ್ಯ ಹಾಗೂ ಸಾಮಾಜಿಕ ಮೌಲ್ಯಗಳು
—ಇಲ್ಲೂರು ಜಯರಾಮಪ

೮. ಜನಪದ ಸಾಹಿತ್ಯದಲ್ಲಿ ಹಾಸ್ಯ
—ಮೃತ್ಯುಂಜಯ ಹೊರಕೇರಿ

೯. ಗಂಗಾದೇವಿಯ ಮಧುರಾ ವಿಜಯ
—ಡಿ. ಎನ್. ಶಾನಭಾಗ

೧೦. ಅನುಭವ ಮಂಟಪದಲ್ಲಿ ಅಕ್ಕಮಹಾದೇವಿ
—ಸಂಗಮೇಶ ಬಿರಾದಾರ

---

ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ